# ಕಾಮತರ ಕುಂಚ ಪ್ರಪಂಚ-1



ಡಾ॥ ಕೃಷ್ಣಾನಂದ ಕಾಮತ್



ಪ್ರಗತಿ ಪುಸ್ತಕಮಾಲೆ-201

# ಕಾಮತರ ಕುಂಚ ಪ್ರಪಂಚ -1

ರೇಖಾಚಿತ್ರ ಸಂಪುಟ

ಡಾ. ಕೃಷ್ಣಾನಂದ ಕಾಮತ್




ಪ್ರಗತಿ ಗ್ರಾಫಿಕ್ಸ್-ಬೆಂಗಳೂರು





**KAMATARA KUNCHA PRAPANCHA**-1 a collection of Drawings by **Dr. Krishnananda Kamat,** 110, Shashikirana, 18th Cross, Malleswara, Bangalore-560 055

Publisher: **M. Byregowda** for **Pragati Graphics**, Bangalore, # 119, 3rd cross, 8th main, Hampinagara(RPC Layout- Vijayanagara), Bengaluru-560104, Ph: 080-2340 9512

| | | |
|---|---|---|
| ISBN | : | 978-93-81441-25-1 |
| pages | : | viii + 128 |
| First Impression | : | 2012 |
| Reprint | : | 2019 |
| paper | : | Maplitho 80 GSM |
| price | : | **Rs. 300/–** |
| size : | | 1/4 Crown |
| ಪುಟಗಳು | : | viii + 129 |
| ಮೊದಲ ಆವೃತ್ತಿ | : | 2012 |
| ಪರಿಷ್ಕೃತ ಆವೃತ್ತಿ | : | 2019 |
| ಕಾಗದ | : | ಮ್ಯಾಪ್ಲಿಥೊ 80 ಜಿಎಸ್ಎಂ |
| ಬೆಲೆ | : | ರೂ. **300/–** |
| © | : | **ಡಾ. ಜ್ಯೋತ್ಸ್ನಾ ಕಾಮತ್** |
| ಸೈಜ್ | : | **1/4 ಕ್ರೌನ್** |
| ಪ್ರತಿಗಳು | : | **1000** |
| ರಕ್ಷಾಪುಟ ವಿನ್ಯಾಸ | : | **ಸುನೀತಾ ಅವಧಾನಿ** |
| ಪ್ರಕಾಶಕರು | : | **ಎಂ. ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ – ಬೆಂಗಳೂರು**<br>ನಂ. 119, 3ನೇ ತಿರುವು, 8ನೇ ಮುಖ್ಯ ರಸ್ತೆ, ಹಂಪಿನಗರ<br>ಬೆಂಗಳೂರು–104. ದೂರವಾಣಿ: 080–23409512 |
| ಮುದ್ರಕರು | : | Sreeranga Graphics<br>The Print People<br>Chamarajpet, Bangalore - 560 018<br>9060312298, 8050437201 |






# ಕುಂಚ ಪ್ರಪಂಚ ಕೃತಿಯ ಹುಟ್ಟು

ಆರಂಭವಾಗಿದ್ದು ಹೀಗೆ: ಹೆಸರಾಂತ ಇತಿಹಾಸ ತಜ್ಞ ಜಿ.ಎಸ್. ದೀಕ್ಷಿತರ ಸಮಗ್ರ ಇಂಗ್ಲಿಷ್ ಲೇಖನಗಳ ಬೃಹತ್ ಸಂಪುಟ ಪ್ರಕಟಣೆಯ ವಿಚಾರದಲ್ಲಿ ಡಾ. ಜ್ಯೋತ್ಸ್ನಾ ಕಾಮತರ ಮನೆಯಲ್ಲಿ ಒಂದು ವರ್ಷದ ಹಿಂದೆ ಸಭೆಯಿತ್ತು. ಪ್ರಕಾಶಕನಾಗಿ ನಾನು ಹೋಗಿದ್ದೆ. ದೀಕ್ಷಿತರ ಪುಸ್ತಕ ಪ್ರಕಟಣೆಯ ಹೊಣೆಹೊತ್ತು ಅದನ್ನು ನಿಭಾಯಿಸಿದೆ. ಮಾತಿನ ಮಧ್ಯದಲ್ಲಿ ಕಾಮತರ ವರ್ಷದ ಕಾರ್ಯಕ್ರಮದ ಬಗ್ಗೆ ಮಾತು ಬಂತು. ಹೊನ್ನಾವರದಲ್ಲಿ ಕಾರ್ಯಕ್ರಮ ನಿಗದಿಯಾಗಿತ್ತು. ನಾನೂ ಆ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವ ಇಚ್ಛೆವ್ಯಕ್ತಪಡಿಸಿ, ಹೋಗುವ ತಯಾರಿಯನ್ನೂ ಮಾಡಿಕೊಂಡೆ. ಆದರೆ ಕಾರಣಾಂತರದಿಂದ ಹೋಗಲು ಸಾಧ್ಯವಾಗಲಿಲ್ಲ. ಅಂತೂ ಕಾರ್ಯಕ್ರಮ ಮುಗಿದು ಜ್ಯೋತ್ಸ್ನಾ ಮೇಡಂ ಹಿಂದಿರುಗಿ ಬಂದಾಗ ಅವರನ್ನು ಭೇಟಿಯಾಗಲು ಸರಿಸುಮಾರು 2012ರ ಜುಲೈ ತಿಂಗಳಲ್ಲಿ ಇರಬಹುದು. ನಾನು ಮತ್ತು ಗೆಳೆಯ ಲವಕುಮಾರ್ ಹೋದೆವು. ಕಾಮತರ ನೆನಪಿನ ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿಯೇ ಮಾಡುವ ನಿರ್ಧಾರವನ್ನು ಜ್ಯೋತ್ಸ್ನಾ ಅವರು ವ್ಯಕ್ತಪಡಿಸಿದಾಗ ಅದರ ಸಾರಥ್ಯವನ್ನು ನಾನು ವಹಿಸುತ್ತೇನೆಂದು ಘೋಷಿಸಿಬಿಟ್ಟೆ. ಆ ಸಂಬಂಧ ಒಂದು ವಿಚಾರ ಸಂಕಿರಣ, ಕಾಮತರ ಛಾಯಾಚಿತ್ರ ಪ್ರದರ್ಶನ ಏರ್ಪಡಿಸುವುದು ಮತ್ತು ವಾರ್ಷಿಕ ಪ್ರಶಸ್ತಿ ಪ್ರದಾನ ಮಾಡುವುದು ಎಲ್ಲವೂ ನಿರ್ಧಾರವಾಗಿ ಸೆಪ್ಟೆಂಬರ್ ತಿಂಗಳಿನಲ್ಲಿ ಕಾರ್ಯಪ್ರವೃತ್ತರಾಗೋಣ ಎಂದು ಹೇಳಿಬಂದೆ. ಈ ಬಾರಿಯ ಉದಯೋನ್ಮುಖ ಪತ್ರಿಕಾಸಾಹಿತ್ಯ ಛಾಯಾಗ್ರಾಹಕ ಪ್ರಶಸ್ತಿ ಪುರಸ್ಕೃತ ಡಿ.ಜಿ. ಮಲ್ಲಿಕಾರ್ಜುನ ಅವರೊಟ್ಟಿಗೆ ಹೋಗಿ, ಕಾರ್ಯಕ್ರಮ ಸ್ವರೂಪದ ಬಗ್ಗೆ ಮಾತನಾಡಿದಾಗ ರೂಪುರೇಷೆಗಳು ಸಿದ್ಧವಾದವು.

ಆಗಾಗ ನನಗೆ ಜ್ಯೋತ್ಸ್ನಾ ಮೇಡಂ ಈ ಸಂಬಂಧ ಫೋನ್ ಮಾಡುತ್ತಿದ್ದರು. ನಾನೂ ಮಾಡೋಣ, ಯಾವುದೇ ಆತಂಕ ಬೇಡ ಎಂದು ಹೇಳುತ್ತಿದ್ದೆ. ಒಮ್ಮೆ ನಾನು, ಲವ, ರಾಮಕೃಷ್ಣ ಬೆಳ್ತೂರ್ ಕೂಡಿ ಜ್ಯೋತ್ಸ್ನಾ ಅವರ ಮನೆಗೆ ಹೋದೆವು. ಡಾ. ಕಾಮತರ ಪುಸ್ತಕಗಳ ಮರುಮುದ್ರಣದ ಬಗ್ಗೆ ಮಾತನಾಡಿ, ಪ್ರಕಾಶಕರೊಬ್ಬರು ತೆಗೆದುಕೊಂಡು ಸತಾಯಿಸುತ್ತಿರುವ ಬಗ್ಗೆ ತಿಳಿಸಿದರು. ಹಾಗೆಯೇ ಕೀಟ ಜಗತ್ತು, ಕಾವಿ ಕಲೆ ಮತ್ತು ಪಶುಪಕ್ಷಿ ಪ್ರಪಂಚ ಪುಸ್ತಕಗಳ ಡಿ.ಟಿ.ಪಿ. ಪ್ರತಿಗಳನ್ನು ಕೊಟ್ಟು ನೋಡಿ ಅರ್ಧಕ್ಕೆ ನಿಂತಿದೆ ಏನು ಮಾಡುವುದು? ವೆಂದರು. ನಾನು ಪ್ರಕಟಿಸುತ್ತೇನೆಂದು ತೆಗೆದುಕೊಂಡು ಬಂದೆ.

ಕಾಮತರ ನೆನಪಿನ ಕಾರ್ಯಕ್ರಮದ ತಯಾರಿ, ಪುಸ್ತಕಗಳ ಮುದ್ರಣದ ಮಧ್ಯೆ ಮತ್ತೊಮ್ಮೆ ಜ್ಯೋತ್ಸ್ನಾ ಅವರ ಮನೆಗೆ ಹೋದೆ. ಆಗ ಕಾಮತರು ಬಿಡಿಸಿದ ವೈವಿಧ್ಯಮಯ ಚಿತ್ರಗಳನ್ನು ಕಂಡೆ. ಸುಮ್ಮನೆ ನೋಡುವ ಇರಾದೆಯಿಂದ ಎತ್ತಿಕೊಂಡು ಬಂದೆ. ನೋಡುತ್ತಿದ್ದಂತೆ ಹೊಸ ತಲೆಮಾರಿನ ಕಲಾವಿದರಿಗೆ ಇವು ಅನುಕೂಲಕ್ಕೆ ಬರಬಹುದು ಎಂಬ ಬಯಕೆಯಿಂದ ಎಲ್ಲವನ್ನೂ ಸ್ಕ್ಯಾನ್ ಮಾಡಿ ಪುಸ್ತಕದ ರೂಪಕ್ಕೆ ತರಲು ಕಲಾವಿದೆ ಸುನಿತಾ ಅವಧಾನಿ ಅವರನ್ನು ಕೋರಿದೆ. ಮುಖಚಿತ್ರವೂ ಸೇರಿದಂತೆ ಚಿತ್ರಗಳನ್ನೆಲ್ಲ ಸ್ಕ್ಯಾನ್ ಮಾಡಿಸಿ ಪುಸ್ತಕದ ರೂಪಕ್ಕೆ ತಂದರು. ತಾಂತ್ರಿಕ ಕಾರಣಗಳಿಂದ ಅವರು ಮಾಡಿಸಿದ್ದ ಸ್ಕ್ಯಾನಿಂಗ್ ಸರಿಯಿರಲಿಲ್ಲ. ಕೂಡಲೇ ನಾನು ಆ ವಿಚಾರವನ್ನು ಅವರಿಗೆ ಮನಗಾಣಿಸಿ, ನಮ್ಮ ಮನೆಯಲ್ಲೇ ಸ್ಕ್ಯಾನ್ ಮಾಡಲು ಹೇಳಿ, ನಾನೂ ಒಂದಷ್ಟು ಚಿತ್ರಗಳನ್ನು ಸ್ಕ್ಯಾನ್ ಮಾಡಿ, ಪುಸ್ತಕ ರೂಪಕೊಟ್ಟು ಪ್ರತಿ ಚಿತ್ರಕ್ಕೂ ಒಂದು ತಲೆಬರಹ ಹಾಗೂ ಇಡೀ ಪುಸ್ತಕಕ್ಕೊಂದು ಶೀರ್ಷಿಕೆ ನೀಡುವಂತೆ ಕೋರಿದೆ. ಪ್ರತಿ ಚಿತ್ರಕ್ಕೂ ತಲೆಬರಹ ಬರೆದುಕೊಟ್ಟ ಅಮ್ಮ ಜ್ಯೋತ್ಸ್ನಾ ಅವರು ಪುಸ್ತಕದ ಶೀರ್ಷಿಕೆಯನ್ನು ನೀವೇ ಸೂಚಿಸಿ ಎಂದರು. **ಕಾಮತರ ಕುಂಚ ಪ್ರಪಂಚ-1** ಎಂದು ಹೆಸರಿಸೋಣ ಎಂದೆ. ಕೂಡಲೇ ಒಪ್ಪಿದರು. ಕೃತಿಯ ಶೀರ್ಷಿಕೆಯ ಮುಂದೆ-1 ಎಂದು ಉಲ್ಲೇಖಿಸಲು ಕಾರಣವೆಂದರೆ: ಕಾಮತರ ಇನ್ನಷ್ಟು ರೇಖಾಚಿತ್ರಗಳು ಅವರ ಪುತ್ರ ವಿಕಾಸ್ ಕಾಮತರ ಬಳಿಯಿರುವುದು ತಿಳಿಯಿತು. ಮತ್ತೊಂದೋ ಎರಡೋ ಸಂಪುಟಗಳನ್ನು ಹೊರತರುವ ಕಮಿಟ್‌ಮೆಂಟ್‌ಗಾಗಿ **ಸಂಪುಟ-1** ಎಂದು ನಮೂದಿಸಲಾಗಿದೆ. ಎರಡನೇ ಸಂಪುಟವೂ ಸಹೃದಯರ ಕೈ ಸೇರುತ್ತದೆಂಬ ವಿಶ್ವಾಸ ನನಗಿದೆ.

ಈ ಪುಸ್ತಕ ಪ್ರಕಟಣೆಯ ಹಿನ್ನೆಲೆಯಲ್ಲಿ ಒಂದಿಷ್ಟು ರೇಖೆಗಳನ್ನು ಕುರಿತ ವಿವರಗಳನ್ನು ನೀಡಲು ಗೆಳೆಯ ಪರಮೇಶ್ ಡಿ. ಜೋಳದ ಅವರು ಜೈನ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ತಮ್ಮ ಎಂ.ಫಿಲ್. ಪ್ರಬಂಧದ ಕೆಲಭಾಗವನ್ನು ಉಲ್ಲೇಖಿಸುತ್ತೇನೆ.



'ರೇಖೆ' ಮನುಷ್ಯನ ಆಲೋಚನೆಗಳಿಗೆ ಆಕಾರ ನೀಡುವ ಮೂಲ ಧಾತು. ಮನಸ್ಸಿನ ಚಿಂತನ-ಮಂಥನಗಳ ಕ್ರಿಯೆಯ ಫಲವಾಗಿ ರೂಪಗೊಳ್ಳುವ ವಿಚಾರಕ್ಕೆ ಸೂಕ್ಷ್ಮವಾದ ಆಕಾರ ಹುಟ್ಟುತ್ತಾ ಹೋಗುತ್ತದೆ. 'ರೇಖೆ'ಗಳು ದೃಶ್ಯಕಲಾಭಿವ್ಯಕ್ತಿಯಲ್ಲಿ ತನ್ನದೇ ಆದ ಪ್ರಾಮುಖ್ಯತೆ ಹೊಂದಿವೆ. 'ದೃಶ್ಯ'ವೆಂದರೆ, ಕಣ್ಣಿಗೆ ಕಾಣುವ ಸತ್ಯ. ಪ್ರತಿಯೊಂದು ಜೀವಿ ತನ್ನ ಶಕ್ತಿ ಸಾಮರ್ಥ್ಯಕ್ಕೆ ಅನುಗುಣವಾಗಿ ಪ್ರತಿಕ್ಷಣ ಏನನ್ನಾದರೂ ಕಾಣುತ್ತಿರುತ್ತದೆ. ಅಂದರೆ ಮನಕಲಕುವ, ಆನಂದ ನೀಡುವ ಅಥವಾ ನೋಡಬಹುದಾದ ವಿಚಾರಗಳನ್ನು ಪ್ರಸ್ತುತ ಪಡಿಸುವ ಕ್ರಿಯೆಯೇ ದೃಶ್ಯಾಭಿವ್ಯಕ್ತಿ.

'ಚಿತ್ರ' 'ರೇಖೆ' ಅಥವಾ 'ವರ್ಣ'ಗಳಿಂದ ರಚಿಸಿದ್ದಾಗಿರಬಹುದು. ಒಂದು ಬಿಂದು ಯಾವುದೇ ದಿಕ್ಕಿನಲ್ಲಿ ಚಲಿಸಿ ಪುನಃ ಅದೇ ಬಿಂದುವನ್ನು ಸೇರಿದಾಗ ಆಕಾರ ಸೃಷ್ಟಿಯಾಗಿ ಅದು ರೇಖಾ ಚಿತ್ರವೆನಿಸಿಕೊಳ್ಳುತ್ತದೆ. ಅದೇ ಆಕಾರಕ್ಕೆ ಬಣ್ಣ ತುಂಬಿದಾಗ 'ವರ್ಣ' ಚಿತ್ರವಾಗುತ್ತದೆ. ಈ ರೀತಿಯ ರೇಖಾ ಅಥವಾ ವರ್ಣ ಚಿತ್ರಗಳು ಮೂರ್ತ ಅಥವಾ ಅಮೂರ್ತಗಳಾಗಿಯೂ ಇರಬಹುದು. ಈ ಕಲೆಯ ಅಂಶಗಳು ಚಿತ್ರಗಳೊಡನೆ ಸೇರಿದಾಗ ಅಥವಾ ಮಿಲನವಾದಾಗ ಅದು 'ಚಿತ್ರಕಲೆ' ಎಂದೆನಿಸಿಕೊಳ್ಳುತ್ತದೆ. ಈ ಚಿತ್ರಕಲೆಯು ಸ್ಥಳಾವಕಾಶ (ತೆರಪು), ರೇಖೆ, ರೂಪ, ಬಣ್ಣ, ಮೈವಳಿಕೆ ಹಾಗೂ ಸಮತೋಲನ ಈ ಎಲ್ಲ ಧಾತುಗಳಿಂದ ಕೂಡಿದುದ್ದಾಗಿದೆ.

ರಚನೆಗೊಂಡ ರೇಖೆಗಳ ಉದ್ದಗಲ, ದಿಶೆ ಹಾಗೂ ಅವುಗಳ ಗಾತ್ರಗಳಲ್ಲಿಯ ವ್ಯತ್ಯಾಸಗಳು ಅವುಗಳಲ್ಲಿ ಅಡಗಿರುವ ವಿಭಿನ್ನ ಸ್ವಭಾವವನ್ನು ಸೂಚಿಸುತ್ತವೆ. ಚಿತ್ರಕಲೆಯಲ್ಲಿ 'ರೂಪ' ಅಥವಾ ಆಕೃತಿಗಳನ್ನು ಬರೀ ಬಾಹ್ಯಾಕಾರದಿಂದ ನೋಡದೆ, ವಸ್ತುವಿನ (ರೂಪ) ಮರ್ಮ ಮತ್ತು ರಹಸ್ಯವನ್ನು ಅರ್ಥೈಸುವುದಕ್ಕೋಸ್ಕರ ಬಳಸಲಾಗುತ್ತದೆ. ರೂಪವು ಅನಂತ ಹಾಗೂ ಅಸೀಮವಾದುದು. ರೂಪದ ಸಾಕ್ಷಾತ್ಕಾರವು ಎರಡು ಪ್ರಕಾರಗಳಿಂದ ಸಾಧ್ಯ. ಒಂದು ಕಣ್ಣಿನಿಂದ ನೋಡುವುದರ ಮೂಲಕ, ಇನ್ನೊಂದು ಆತ್ಮದ ಮೂಲಕ.

'ರೇಖೆ' ಮನುಷ್ಯನ ಚಿಂತನೆಗೆ ಆಕಾರ ಸ್ವರೂಪವನ್ನು ಸೃಷ್ಟಿಸುವ ಮೂಲ ಧಾತು. ಮನಸ್ಸಿನ ಚಿಂತನ-ಮಂಥನಗಳ ಕ್ರಿಯೆಯ ಫಲವಾಗಿ ರೂಪಗೊಳ್ಳುವ ವಿಚಾರಕ್ಕೆ ಸೂಕ್ಷ್ಮವಾದ ಆಕಾರ ಹುಟ್ಟುತ್ತದೆ. ಆಕಾರ ರಚನೆ ರೇಖೆಯ ಚಲನೆಯಿಂದ ಅಥವಾ ಆಕಾರದ ಅಂಚನ್ನು ಗುರುತಿಸುವ ಮೂಲಕ ಸೃಷ್ಟಿಯಾಗುತ್ತದೆ. ಈ ರೀತಿ 'ರೇಖೆ' ದೃಶ್ಯಕಲಾಭಿವ್ಯಕ್ತಿಯಲ್ಲಿ ಮೂಲ ಧಾತುವಾಗಿ, ತನ್ನದೇ ಆದ ಪ್ರಾಮುಖ್ಯತೆ ಹೊಂದಿದೆ. ಇದರ ತಾತ್ಪರ್ಯ ಮನಕಲಕುವ, ಆತ್ಮಾನಂದ ನೀಡುವ ಮತ್ತು ನೋಡಬಹುದಾದಂತಹ ವಿಚಾರಗಳನ್ನು ದೃಶ್ಯಗಳ ಮೂಲಕ ಪ್ರಸ್ತುತ ಪಡಿಸುವ ಕ್ರಿಯೆಯೇ ದೃಶ್ಯಾಭಿವ್ಯಕ್ತಿ ಎನಿಸಿಕೊಳ್ಳುವುದು. ಜೊತೆಗೆ ವ್ಯಕ್ತಿ ವ್ಯಕ್ತಿಗೂ ಇಲ್ಲಿ ವಿಭಿನ್ನತೆಯನ್ನು ನಾವು ಕಾಣುತ್ತೇವೆ. ಬದಲಾವಣೆ ಪ್ರಕೃತಿ ನಿಯಮ. ಅದರಲ್ಲೂ ಮಾನವ ಇದಕ್ಕೆ ವ್ಯತಿರಿಕ್ತವೆಂಬಂತೆ ಪ್ರಕೃತಿಗೆ ಸವಾಲೊಡ್ಡುವ ನಿಟ್ಟಿನಲ್ಲಿ ತನ್ನ ಜೀವನದ ಪ್ರತಿ ಹಂತದಲ್ಲೂ ಪ್ರಗತಿ ಸಾಧಿಸುತ್ತ ಬದಲಾವಣೆಯ ಸವಿಯನ್ನು ಅನುಭವಿಸುತ್ತಾ ಬಂದಿದ್ದಾನೆ. **(ಆಧಾರ: ದೃಶ್ಯಾಭಿವ್ಯಕ್ತಿಯಲ್ಲಿ ರೇಖೆಯ ಪ್ರಾಮುಖ್ಯತೆ -ಪರಮೇಶ್ ಡಿ. ಜೋಳದ್ ಅವರ ಅಪ್ರಕಟಿತ ಎಂ.ಫಿಲ್. ಪ್ರಬಂಧದಿಂದ)**

ಸ್ಕ್ಯಾನ್ ಮಾಡಿದ ಚಿತ್ರಗಳನ್ನು ಪುಟಗಳಿಗೆ ಅಳವಡಿಸಿ ಮೊದಲ ಕರಡನ್ನು ತೆಗೆದುಕೊಂಡು ಹೋಗಿ ಡಾ. ಜ್ಯೋತ್ಸ್ನಾ ಕಾಮತರ ಮನೆಗೆ ಕೊಟ್ಟು, ಪ್ರತಿ ಪುಟಗಳಿಗೂ ಒಂದೊಂದು ಶೀರ್ಷಿಕೆ ನೀಡಬೇಕೆಂದು ಹೇಳಿಬಂದೆ. ಹಗಲು ರಾತ್ರಿಗಳ ಪರಿವೆಯಿಲ್ಲದೆ ಇಪ್ಪತ್ನಾಲ್ಕು ಗಂಟೆಗಳಲ್ಲಿ ಅವರು ಸಿದ್ದಪಡಿಸಿಟ್ಟಿದ್ದರು.

ಈ ಹಿನ್ನೆಲೆಯಲ್ಲಿ ಕಾಮತರು ಬಿಡಿಸಿಟ್ಟಿದ್ದ ರೇಖಾಚಿತ್ರಗಳು ಕೃತಿರೂಪ ಪಡೆದಿವೆ. ಈ ಕೃತಿಯಲ್ಲಿ ಆದಿವಾಸಿ ಚಿತ್ರಗಳು ಬಹುಸಂಖ್ಯೆಯಲ್ಲಿವೆ. ಡಾ. ಜ್ಯೋತ್ಸ್ನಾ ಕಾಮತರ ಬರೆಹಗಳಿಗೆ ಕಾಮತರು ರಚಿಸಿಕೊಟ್ಟ ಕೆಲವು ಸ್ಯಾಂಪಲ್‌ಗಳನ್ನು ಇಲ್ಲಿ ಸೇರಿಸಲಾಗಿದೆ. ಈ ನಾಡು ಕಂಡ ಅಪರೂಪದ ಬಹುಮುಖ ಪ್ರತಿಭೆ. ಡಾ. ಕೃಷ್ಣಾನಂದ ಕಾಮತರ ಈ ಸಂಪುಟವನ್ನು ಪ್ರಕಟಿಸುವಲ್ಲಿ ಅತೀವ ಆನಂದವಿದೆ. ಇದನ್ನೆಲ್ಲ ಆಗುಮಾಡಿದ ಅಮ್ಮ ಜ್ಯೋತ್ಸ್ನಾ ಕಾಮತ್ ಅವರಿಗೆ ಆಭಾರಿಯಾಗಿದ್ದೇನೆ. ಕಾಮತರ ಪುತ್ರ ವಿಕಾಸ್ ಕಾಮತ್ ದೂರದ ಅಮೇರಿಕಾದಿಂದಲೇ ನಮ್ಮ ಕೆಲಸವನ್ನು ಪ್ರೋತ್ಸಾಹಿಸಿದ್ದಾರೆ. ಕೃತಿಗೆ ಒಪ್ಪುವ ಒಳ್ಳೆಯ ಮುಖಚಿತ್ರ ರಚಿಸಿಕೊಟ್ಟ ಹಾಗೂ ಈ ಕೃತಿ ಹೊರಬರುವಲ್ಲಿ ಸಹಕರಿಸಿದ ಕಲಾವಿದೆ ಸುನೀತಾ ಅವಧಾನಿ ಅವರನ್ನು, ಅಂದವಾಗಿ ಮುದ್ರಿಸಿದ ಪೂರ್ಣಿಮಾ ಪ್ರಿಂಟರ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗವನ್ನು ಸ್ಮರಿಸುವೆ. ಕಾಮತರ ಕುಂಚ ಪ್ರಪಂಚ-1 ಕೃತಿ ಹೊರಬರುವಲ್ಲಿ ಗೆಳೆಯ ಆರ್. ಲವ ಅವರ ಸಹಾಯವನ್ನು ಹೇಗೆ ಮರೆಯಲಿ? ಕೃತಿ ನಿಮ್ಮ ಕೈಯಲ್ಲಿದೆ ಗುಣಾವಗುಣಗಳ ತೀರ್ಪು ಓದುಗರು/ನೋಡುಗರಾದ ನಿಮ್ಮದು.

**ಡಾ. ಎಂ. ಬೈರೇಗೌಡ**



# ಪ್ರಾಸ್ತಾವಿಕವಾಗಿ

ಕೃಷ್ಣಾನಂದ ಕಾಮತರು ಹುಟ್ಟಾ ನಿಸರ್ಗಪ್ರಿಯರು. ಅವರ ಹುಟ್ಟೂರಾದ ಹೊನ್ನಾವರದ ಶರಾವತಿ ನದಿ ಕಡಲು ಮತ್ತು ಕಡಲಿಗೇ ನುಗ್ಗಿದಂತಿದ್ದ ಸಹ್ಯಾದ್ರಿಯ ಅಂಚುಗಳೆಲ್ಲ ಅವರ ಸೌಂದರ್ಯಾರಾಧನೆಗೆ ನೀರೆರೆದಿದ್ದವು. ಮನುಷ್ಯರಿಗಿಂತ ಅವರಿಗೆ ಪಶು-ಪಕ್ಷಿ, ಹುಳ-ಹುಪ್ಪಡಿ, ಗಿಡಮರ, ಎಲೆ, ಹೂಗಳೇ ಹೆಚ್ಚು ಪ್ರಿಯವಾಗಿದ್ದವು! ನಿಸರ್ಗದೊಂದಿಗೆ ಒಂದಾಗಿ ಬದುಕುವ ಆದಿವಾಸಿಗಳು ಅವರಿಗೆ ನಗರವಾಸಿಗಳಿಗಿಂತ ಹತ್ತಿರದವರೆನಿಸಿದ್ದರು. ಅವರ ಜಿಲ್ಲೆ, ಉತ್ತರ ಕನ್ನಡವು ವಿವಿಧ ಬುಡಕಟ್ಟು ಜನಾಂಗಗಳ ನೆಲೆಯೂ ಹೌದು. ಹಾಲಕ್ಕಿ, ಗೊಂಡ, ಗಾಮೊಕ್ಕಲು, ಕುಡುಬಿ, ಸಿದ್ದಿಗಳನ್ನು ನೋಡುತ್ತಲೇ ಬೆಳೆದವರು ಕಾಮತರು.

ಪರಿಸರ ವಿಜ್ಞಾನದಲ್ಲಿ ವಿಶ್ವದಲ್ಲೇ ಹೆಸರು ಮಾಡಿದ ಮಹಾವಿದ್ಯಾಲಯದಿಂದ ಕೀಟಶಾಸ್ತ್ರ ಮತ್ತು ಸಿರೆಕ್ಯೂಟ್ ಅರಣ್ಯ ರಕ್ಷಣೆಗಳಲ್ಲಿ ವಿಶೇಷ ಅಧ್ಯಯನ ಮಾಡಿ ಬಂದ ಕಾಮತರಿಗೆ ಈ ದೇಶದಲ್ಲಿ ಒಂದು **ಚಿಕ್ಕ ನೌಕರಿಯೂ ಸಿಗದಾದಾಗ** ಅವರು ಸ್ವಂತ ವೈಜ್ಞಾನಿಕ ಫೋಟೋ ಲ್ಯಾಬೋರೇಟರಿ ತೆಗೆದರು (1971).

1976ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯು ನೆರೆರಾಜ್ಯವೊಂದಕ್ಕೆ ಹೋಗಿ ಒಂದು ವರ್ಷಕಾಲ ವಾಸಿಸಿ ಅಲ್ಲಿನ ಜನಜೀವನ, ರೂಢಿ, ಸಂಪ್ರದಾಯಗಳು, ಕಲೆಗಳು, ಇತ್ಯಾದಿಗಳ ಕುರಿತು ಪರಿಚಯ ಗ್ರಂಥ ಬರೆಯಲು ಸಾಹಿತಿಗಳನ್ನು ಪ್ರೋತ್ಸಾಹಿಸಲು ಶಿಷ್ಯವೇತನವನ್ನು ಘೋಷಿಸಿತು. ಒಂದು ವರ್ಷ ಹೊರರಾಜ್ಯ ಪ್ರವಾಸ ಮಾಡಿ, ಅಧ್ಯಯನದ ಕೃತಿಯೊಂದನ್ನು ಬರೆದುಕೊಡಲು 12 ಸಾವಿರ ರೂಪಾಯಿಗಳು. ವರ್ಷಪೂರ್ತಿ ಅಧ್ಯಯನ ಕುರಿತ ಗ್ರಂಥನಿರ್ಮಾಣವೇ ಈ ಯೋಜನೆಯ ಉದ್ದೇಶವಾಗಿತ್ತೆಂಬುದರಲ್ಲಿ ಸಂದೇಹವಿರಲಿಲ್ಲ!

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಅಧ್ಯಯನಕಾರನು ತನ್ನ ಅಧ್ಯಯನಕ್ಕೆ ಯಾವ ರಾಜ್ಯವನ್ನಾದರೂ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಲೇಖಕರಿಗೇ ಕೊಟ್ಟಿತ್ತು. ಯಾರೇ ಆದರೂ ಸಾರಿಗೆ ಆಧುನಿಕ ಸಲಕರಣೆಗಳು ವಿಶ್ವವಿದ್ಯಾಲಯ, ಉಳಿದುಕೊಳ್ಳಲು ವ್ಯವಸ್ಥಿತ ನಿವಾಸ ಇರುವ ರಾಜ್ಯವನ್ನೇ ಆಯ್ದು ಕೊಳ್ಳುತ್ತಿದ್ದರೇನೋ! ಆ ಘೋಷಣೆಗೆ ಯಾರ್ಯಾರು ಸ್ಪಂದಿಸಿದರೋ ಗೊತ್ತಿಲ್ಲ! ಆದರೆ ಕಾಮತರಿಗೆ ಸಿಕ್ಕಿತು. ಅವರು ಆರಿಸಿದ್ದು ಹಿಂದುಳಿದ ಅತಿದೊಡ್ಡ ರಾಜ್ಯವಾಗಿದ್ದ ಮಧ್ಯಪ್ರದೇಶವನ್ನು. ಭಾರತದ ಬುಡಕಟ್ಟು ನಿವಾಸಿಗಳ ಶೇಕಡಾ 38ರಷ್ಟು ಜನಸಂಖ್ಯೆ ಇದ್ದ ನೆಲೆವೀಡನ್ನು ಕಾಮತರು ಆಯ್ಕೆಮಾಡಿಕೊಂಡರು. ಸಾರಿಗೆಯ ಅನುಕೂಲ, ವಿದ್ಯುತ್ತು ಮತ್ತಿತರ ನಾಗರಿಕ ಸೌಕರ್ಯಗಳು ಹೋಗಲಿ, ಕುಡಿಯಲು ಸ್ವಚ್ಛ ನೀರೂ ಸಿಗದ ಗ್ರಾಮಾಂತರ ಪ್ರದೇಶವೇ ಭೂಯಿಷ್ಠವಾದ ನಾಡದು! ಆಗ ಬೆಂಗಳೂರು ಭೂಲೋಕದ ನಂದನದಂತಿತ್ತು. ಅತಿ ಅಗ್ಗದ ಹೇರಳ ವಿದ್ಯುತ್ತು, ಸ್ವಚ್ಛ ಹವೆ, ಯಥೇಚ್ಛ ಸರಬರಾಜಗುವ ನೀರು ಇತ್ಯಾದಿಗಳ ನಗರವಾಗಿತ್ತು. ಎಲ್ಲಾ ಅನುಕೂಲಗಳಿದ್ದ ಬೆಂಗಳೂರು ಬಿಟ್ಟು ಅದ್ಯಾರು ಕಾಡು-ಕಣಿವೆ-ಪರ್ವತ ಪ್ರದೇಶಕ್ಕೆ ಹೋಗ್ತಾರೆ? ಹೋದರೂ ಆಯಾ ರಾಜ್ಯದ ನಗರ ಅಥವಾ ಮಹಾನಗರದಲ್ಲಿದ್ದು, ವಿಷಯ ಸಂಗ್ರಹಿಸಿ ಪುಸ್ತಕದ ಹಸ್ತಪ್ರತಿ ಕೊಡುತ್ತಾರಷ್ಟೆ! ಎಂದು ಕಾಮತರಿಗೆ ಗುರುಗಳಾಗಿದ್ದ ಕವಿ, ಗೋಪಾಲಕೃಷ್ಣ ಅಡಿಗರು, ಕಾಮತರು ಬಸ್ತರದ ಕಾಡಿಗೆ ಹೋಗಿದ್ದ ವಿಚಾರ ತಿಳಿದಾಗ ಉದ್ಗರಿಸಿದ್ದರು.

ಹುಚ್ಚು ಅಲೆಮಾರಿಗಳಾಗಿದ್ದ ಕಾಮತರಿಗೆ ಇದೊಂದೂ ಎಗ್ಗಿಲ್ಲದೆ ಅಲೆಯುವ ಸುಸಂಧಿಯಾಯ್ತು! ಎರಡು ಜೊತೆ ಬಟ್ಟೆ, ಮಣಭಾರದ ಟ್ರೈಪಾಡ್, ಟೆಲಿಲೆನ್ಸ್, ಫ್ಲಾಷ್‌ಗನ್, ಕ್ಯಾಮರಾಗಳನ್ನು ಹೊತ್ತು ಹೊರಟರು. ರಾಮಾಯಣದ ಶಬರೀವನಕ್ಕೆ. ಈಗಿನ ಸುಂದರಬನ್‌ಗೆ. ಅದರಲ್ಲೂ ಆದಿವಾಸಿಗಳ ಬಾಹುಳ್ಯವಿದ್ದ ಪ್ರದೇಶದ ಮಧ್ಯವರ್ತಿ ಪುಟ್ಟ ಪಟ್ಟಣವಾಗಿದ್ದ ಛಿಂದವಾಡಕ್ಕೆ. ಅಲ್ಲಿ ಒಂದು ಆದಿವಾಸಿ ಸಂಶೋಧನಾ ಕೇಂದ್ರ ಇದ್ದದ್ದು ಪತ್ರಿಕೆಯೊಂದರಲ್ಲಿ ಓದಿ ಗುರುತು ಹಾಕಿಕೊಂಡಿದ್ದರು. ಸಣ್ಣಮನೆ ಬಾಡಿಗೆಗೆ ಪಡೆದು ಕೊನೆಯಿಲ್ಲದ ತಿರುಗಾಟಕ್ಕೆ ತೊಡಗಿದರು.

ಉತ್ತಮ ಛಾಯಾಗ್ರಹಣಕ್ಕೆ ಬೇಕಾದ ಯಾವ ಉಪಕರಣಗಳೂ ಕಾಮತರ ಬಳಿ ಇರಲಿಲ್ಲ. ಸಾಲದ್ದಕ್ಕೆ ಆದಿವಾಸಿಗಳನ್ನು ಕ್ಲಿಕ್ಕಿಸುವುದು ಸುಲಭವೂ ಆಗಿರಲಿಲ್ಲ. ತಮ್ಮವರಲ್ಲದ ಜನರ ಬಗ್ಗೆ ಅವರಲ್ಲಿ ಸ್ವಾಭಾವಿಕವಾದ ಸಂಕೋಚ, ಭಯಗಳಿರುತ್ತವೆ. ಕೈಯಲ್ಲಿ ಕ್ಯಾಮರಾ ಕಂಡರಂತೂ ಓಡಿಹೋಗಿ ಅಡಗಿಕೊಳ್ಳುತ್ತಿದ್ದರು. ಅವರಲ್ಲಿಯೇ ಹಲವು ಉಪಭಾಷೆಗಳಿದ್ದವು. ಹೀಗಾಗಿ ಹಿಂದಿಯನ್ನು ಚೆನ್ನಾಗಿ ಬಲ್ಲ ಕಾಮತರಿಗೂ ಸಂಪರ್ಕ ಸರಳವಾಗಲಿಲ್ಲ.



ಆದರೆ ಯಾವುದೇ ಭಾಷೆಯನ್ನು ಬೇಗನೆ ಅರ್ಥಮಾಡಿಕೊಳ್ಳುವ ಹೆಚ್ಚಿನ ಚುರುಕುತನ ಅವರಲ್ಲಿತ್ತು. ಬರುತ್ತ, ಹೋಗುತ್ತಾ, ಇತರರಿಗೂ ಆಯಾ ವ್ಯಕ್ತಿಗೂ ಪತ್ತೆಯಾಗದಂತೆ ಕ್ಲಿಕ್ಕಿಸುವ ಕಲೆಯನ್ನು ರೂಢಿಸಿಕೊಂಡರು.

ಕಂಡದ್ದನ್ನೆಲ್ಲ ಕ್ಲಿಕ್ಕಿಸುವ ಚಟವಿದ್ದಂತೆ, ಕ್ಲಿಕ್ಕಿಸಿದ್ದನ್ನು ವ್ಯವಸ್ಥಿತವಾಗಿ ದಾಖಲಿಸುವ ಮತ್ತು ಕಾದಿರಿಸುವ ಶಿಸ್ತನ್ನು ಕಾಮತರು ಮೈಗೂಡಿಸಿಕೊಂಡಿದ್ದರು. ಆದರೆ ಅಲೆಮಾರಿ ಜೀವನದಲ್ಲಿ ಇದಕ್ಕೆಲ್ಲ ಯಾವಾಗಲೂ ಅವಕಾಶ ಇರುತ್ತಿರಲಿಲ್ಲ. ತಂಗುದಾಣವಾಗಿದ್ದ ಛಿಂದವಾಡಕ್ಕೆ ಮರಳಿ ಹೋದೊಡನೆ ಆ ಊರಿನಲ್ಲಿ ಲಭ್ಯವಿದ್ದ ರಾಸಾಯನಿಕಗಳನ್ನು ಬಳಸಿ 'ತೊಳೆದು' ನೆಗೆಟಿವ್‌ಗಳನ್ನು ಒಣಗಿಸಿ, ನಂಬರು ಹಾಕಿ, ಪ್ರತಿ ಫ್ರೇಮಿನಲ್ಲಿದ್ದ ವಿಷಯ, ವ್ಯಕ್ತಿ, ದೃಶ್ಯವನ್ನು ಕಾದಿರಿಸುತ್ತಿದ್ದರು.

ಒಂದು ವರ್ಷದ ಬಳಿಕ ಬೆಂಗಳೂರಿಗೆ ಹಿಂದಿರುಗಿದ ಕೃಷ್ಣಾನಂದರು ಬಹುಕಾಲ 'ಅಮೀಬಿಕ್ ಡಾಯರಿಯ'ದಿಂದ ನರಳಿದರು. ಗಿರಿಜನ ಹಾಡಿಗಳ ಸುತ್ತಾಟದಲ್ಲಿ ಹೊಂಡದ ಕಲುಷಿತ ನೀರು ಕುಡಿಯುವುದು ಅವರಿಗೆ ಅನಿವಾರ್ಯವಾಗಿತ್ತು. ಅದಕ್ಕಿಂತ ಆಘಾತಕಾರಿ ವಿಚಾರವೆಂದರೆ ಅವರು ಪ್ರಯಾಸಪೂರ್ವಕ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಬರೆದ ಹಸ್ತಪ್ರತಿಯನ್ನು ಪ್ರಕಟಿಸದೆ ಅಕಾಡೆಮಿ ಕೈ ಚೆಲ್ಲಿದ್ದು! 'ಹಣವೂ ಇಲ್ಲ, ಶ್ರಮಪಟ್ಟು ಬರೆದದ್ದನ್ನು ಓದುವವರು ಮೊದಲೇ ಇಲ್ಲವೆಂದು ಹಸ್ತಪ್ರತಿ ಮರಳಿಸಿಬಿಟ್ಟರು! ಆ ಬಳಿಕ ಒಂದೊಂದೇ ತಿಂಗಳು ಆಳವಾದ ಅಧ್ಯಯನವನ್ನು ಕೈಗೊಳ್ಳಲು ನೂರಾರು ಲೇಖಕರನ್ನು ಹುರಿದುಂಬಿಸಿ, ಪುಸ್ತಕಗಳನ್ನು ಬರೆಸಿ, ಕನ್ನಡಿಗರ ಜ್ಞಾನಭಂಡಾರವನ್ನು ಬೆಳೆಸಲು ಸಹಾಯ ಮಾಡಿತು! ರಾಜ್ಯಸರಕಾರ ಹದಿನೈದು ವರ್ಷಗಳ ಬಳಿಕ ಪ್ರಕಾಶಕ ಕೆ.ಎಸ್. ಗೋಪಾಲ್ ಅವರು ಕಾಮತರ ಈ ಪ್ರವಾಸದ ಒಂದು ಮೂರಾಂಶ ಭಾಗವಾಗಿದ್ದ 'ಬಸ್ತರ್ ಪ್ರವಾಸ'ವನ್ನು ಪ್ರಕಟಿಸಿದರು. ತಾವೇ ಬಂದು ಪರಿಚಯಿಸಿಕೊಂಡು ಪುಸ್ತಕ ಹಾಕುತ್ತೇನೆ' ಎಂದ ಸಜ್ಜನರು. ಮುಂದೆ ಅದಕ್ಕೆ ವರ್ಷದ ಅತ್ಯುತ್ತಮ ಪ್ರವಾಸಕಥನವೆಂದು ಪ್ರಶಸ್ತಿ ಲಭಿಸಿತು.

ಓರ್ವ ಪ್ರಕಾಶಕರ ಅರೆಮನಸ್ಸಿನಿಂದ 'ಕಾಲರಂಗ' ಬೆಳಕು ಕಂಡರೆ, ಬಂಧುವೊಬ್ಬರ ಆರ್ಥಿಕ ಸಹಾಯದಿಂದ ಮಧ್ಯಪ್ರದೇಶದ ಮಡಿಲಲ್ಲಿ' ಪ್ರಕಟವಾಯಿತು.

ಚಿತ್ರ-ಪತ್ರಿಕೋದ್ಯಮ ಅಥವಾ ಫೋಟೋ ಜರ್ನಲಿಸಂ ಆಗ ಶೈಶವಾವಸ್ಥೆಯಲ್ಲಿತ್ತು. ಮೂಲತಃ ಚಿತ್ರಕಾರರೂ, ಛಾಯಾಚಿತ್ರಗ್ರಾಹಕರೂ ಆಗಿದ್ದ ಕೃಷ್ಣಾನಂದರ ಮುಖ್ಯ ಪುಸ್ತಕಗಳಾಗಿದ್ದ 'ಕೀಟ ಜಗತ್ತು', 'ಕಾಲರಂಗ'ಗಳು ಚಿತ್ರಗಳಿಲ್ಲದೇ ಬೋಳಾಗಿ ಪ್ರಕಟವಾದವು. ಸಾಮಾನ್ಯವಾಗಿ ಕಾಮತರನ್ನು ಮನೆಗೆ ಬಂದೋ, ಪತ್ರ ಬರೆದೋ ಪುಸ್ತಕ ಲೇಖನಗಳನ್ನು ವಿನಂತಿಸಿ ಪಡೆಯುವ ಪ್ರಕಾಶಕರು ಅಲ್ಲದೇ, ಕೆಲಬಾರಿ ಪತ್ರಿಕೆಯವರೂ ಸಹ ಸಚಿತ್ರ ಬರಹಗಳನ್ನು ಪ್ರಕಟಿಸಲು ಹಿಂದೇಟು ಹಾಕುತ್ತಿದ್ದರು. ಚಿತ್ರಪ್ರಕಟಣೆ ದುಬಾರಿಯಾಗಿತ್ತು. ವರ್ಣಚಿತ್ರಗಳ ಅಳವಡಿಕೆಯೂ ಕಷ್ಟಸಾಧ್ಯವಿತ್ತು.

ಇಂಥಲ್ಲಿ ಕಾಮತರು ಪ್ರಕಟಣೆಯ ಯಾವ ಭರವಸೆಯೂ ಇಲ್ಲದೆ ಸಾವಿರಾರು ನೆಗೆಟಿವ್‌ಗಳನ್ನು ಆಧರಿಸಿ ರೇಖಾಚಿತ್ರಗಳನ್ನು ತಯಾರಿಸಿದರು. ಭಿಲ್ಲರು, ಹಲ್ಬಿಗಳು, ಮಾಂಡರು, ಮುರಿಯರು, ಗೊಂಡರು, ಮವಾಶಿಯರು, ಕೊರ್ತು, ಆದಿವಾಸಿಗಳ ದೈನಂದಿನ ಜೀವನ, ವೇಷಭೂಷಣ, ಚಟುವಟಿಕೆಗಳನ್ನೆಲ್ಲ ಕಾದಿರಿಸಿದರು. ಯಾರಿಗೂ ಈ ರೇಖಾಚಿತ್ರಗಳ ಸಾತತ್ಯವಾಗಲಿ, ಮಹತ್ವವಾಗಲಿ ಅರ್ಥವಾಗಲೇ ಇಲ್ಲ. ಆದಮ್‌ಗಡ್, ಭೀಮ್‌ಬೆಟ್ಕಾಗಳಲ್ಲಿ ಕ್ಲಿಕ್ಕಿಸಿದ ಸಹಸ್ರಾರು ಪ್ರಾಗ್ಯೈತಿಹಾಸಿಕ ಜನಜೀವನದ ಅರ್ಥವನ್ನೂ ಮಾಡಿಕೊಳ್ಳದವರ ನಡುವೆ ಲೇಖಕರ ಇತಿಹಾಸಪ್ರಜ್ಞೆ ಇರುವಾಕೆ ಎನಿಸಿಕೊಳ್ಳುವ ಪತ್ನಿಯೂ ನಿಸ್ಸಹಾಯಕಳಾಗಿರಬೇಕಾಯಿತು!

ಕಾಮತರು ಬಸ್ತರದಿಂದ ಹಿಂದಿರುಗಿದ ದಶಕದ ಒಳಗೇ ಅಲ್ಲಿ ಎರಡು ದೊಡ್ಡ ಖನಿಜ ನಿಕ್ಷೇಪಗಳು ಪತ್ತೆಯಾದವು. ಅತಿ ಭರದಿಂದ ಕಾಡು ಕಣ್ಮರೆಯಾಯಿತು. ಕಾಡಿನ ಮಕ್ಕಳು ಗಣಿಗಳಲ್ಲಿ ಕೂಲಿಗಳಾಗಿ ದುಡಿದು ಹೊಟ್ಟೆ ಹೊರೆದುಕೊಳ್ಳುವ ಪ್ರಸಂಗ ಬಂದಿತು. ಕಾಡುಪ್ರಾಣಿಗಳಂತೆಯೇ ಸ್ವಚ್ಛಂದತೆಯಿಂದ ಬದುಕಿದವರಿಗೆ ಕಾಡಿಗೆ ಪ್ರವೇಶವೇ ನಿಷಿದ್ಧವಾಯ್ತು. ಹತಾಶೆಯ ಅಂಚಿಗೆ ತಳ್ಳಲ್ಪಟ್ಟವರಲ್ಲಿ ಕೆಲವರು ಗುಳೇಹೋದರೆ, ಇತರರು ನಾಗರಿಕತೆಯ ರೋಗ-ರುಜಿನಗಳಿಗೆ ತುತ್ತಾದರು. ಈಗಂತೂ ಆ ಪ್ರದೇಶ, ನಕ್ಸಲರ ಅಡಗುತಾಣವಾಗಿದೆ. ಕಾಮತರು ಕಣ್ಣೇ ಕೆಮರಾ ಮಾಡಿಕೊಂಡು ಮುಕ್ತವಾಗಿ ಓಡಾಡಿದ ದಂತೇವಾಡಾವೇ 2009-10ರಲ್ಲಿ ಮಾರಣಹೋಮದ ತಾಣವಾಗಿ ಪರಿಣಮಿಸಿತು. ಈ ಬರಲಿರುವ ದುರ್ಭರ ದಿನಗಳ ಕುರಿತು ಕಾಮತರ ಮೂರೂ ಪುಸ್ತಕಗಳಲ್ಲಿ ಮುನ್ಸೂಚನೆಗಳು ಇದ್ದವು ಎನ್ನುವುದನ್ನೂ ಮರೆಯುವಂತಿಲ್ಲ. ಅವರ ಸಚಿತ್ರ ಬರವಣಿಗೆ, ಇತಿಹಾಸಕ್ಕೆ ಸೇರ್ಪಡೆಯಾಯ್ತು!



**ಕಾಮತರು ಮೂವತ್ತೈದು ವರ್ಷಗಳ ಹಿಂದೆ ಕ್ಲಿಕ್ಕಿಸಿದ/ಚಿತ್ರಿಸಿದ ಚಿತ್ರಗಳು ಈಗ ಮಾಯವಾಗಿಹೋದ ಅಥವಾ ತೀರಾ ವಿರಳವಾಗಿ ಹೋದ ಬುಡಕಟ್ಟು ಜನಾಂಗಗಳ ದೈನಂದಿನ ಜೀವನದ ದಾಖಲೆಗಳಾಗಿ ಹಿಂದೆಂದಿಗಿಂತಲೂ ಸಾಮಯಿಕವಾಗಿವೆ. ಕಾಡಿನ ವಿಶ್ವದ ಅಪರೂಪದ ಇಣುಕುನೋಟಗಳಾಗಿವೆ.**

ಇಷ್ಟಾದರೂ ಪ್ರಕಟನೆಯ ಭಾಗ್ಯ ಒದಗದ ಚಿತ್ರಗಳಿಗೆ ನಮ್ಮ ಕಂಪ್ಯೂಟರ್ ಇಂಜಿನಿಯರ್ ಮಗ ವಿಕಾಸನು www.kamat.com ಎಂಬ ವೆಬ್ಸೈಟ್ 1997ರಲ್ಲಿ ಪ್ರಾರಂಭಿಸಿದ. ಇಂಟರ್‌ನೆಟ್ ತಂತ್ರದ ಮೂಲಕ ಈ ಚಿತ್ರಗಳಿಗೆ ಪ್ರಸಾರ ರೂಪ ಕೊಡಲಾರಂಭಿಸಿದ. ಮೂಲೆ ಮೂಲೆಯ ಇಂಗ್ಲಿಷ್ ಭಾಷೆಯಾಚೆಯ ಜರ್ಮನಿ, ಸ್ಕಾಂಡಿನೇವಿಯಾ, ಯುಕ್ರೇನ್, ಮೊಝಾಂಬಿಕ್, ಬ್ರಾಝಿಲ್, ಮಲೇಶಿಯ, ಮಂಗೋಲಿಯಗಳಿಂದ ಮೆಚ್ಚುಗೆಯ ಈ ಮೇಲ್ ಬರಲಾರಂಭಿಸಿತು! ಕಾಮತರ ಆಕಸ್ಮಿಕ ನಿಧನದ ಬಳಿಕವೂ ಚಿತ್ರ-ಪ್ರಸಾರ ನಿಲ್ಲಲಿಲ್ಲ. ಇವತ್ತಿಗೆ 28,000 ಬಗೆಬಗೆಯ ಎಲ್ಲ ಚಿತ್ರಗಳು ಕಾಮತ್ ವೆಬ್‌ಸೈಟ್‌ದಲ್ಲಿವೆ.

ಕೊನೆಗೊಮ್ಮೆ ಈ ವರ್ಷದಲ್ಲಿ (2012) ಬುಡಕಟ್ಟು ಜನಾಂಗಾಧಾರಿತ 'ಚಿತ್ರ ಸಂಪದ'ಕ್ಕೆ ಕನ್ನಡದಲ್ಲಿ ಬೆಳಕು ಕಾಣುವ ಸುಯೋಗ ಒದಗಿತು. ಸ್ವತಃ ಜಾನಪದ ವಿದ್ವಾಂಸರು, ಕಲಾತಜ್ಞರು, ಸಾಹಸಿ ಸಂಶೋಧಕರು, ಹೆಚ್ಚಿನ ಪರಿಶ್ರಮಿಯೂ ಆಗಿರುವ ಡಾ. ಎಂ. ಬೈರೇಗೌಡರ ಶಾಶ್ವತ-ಶೋಧಕ ಕಣ್ಣಿಗೆ ಈ ಚಿತ್ರಗಳು ಬಿದ್ದವು. ಅವರು ತಡಮಾಡದೇ ಪ್ರಾಯೋಗಿಕ ರೂಪದಲ್ಲಿ ಮೊದಲ ಸಂಪುಟವನ್ನು ನಂಬಲಸಾಧ್ಯವಾದ ಕಡಿಮೆ ಸಮಯದಲ್ಲಿ ಹೊರತಂದಿದ್ದಾರೆ.

ಈ ಚಿತ್ರ ಸಂಪುಟ, ಇತಿಹಾಸ, ಪ್ರಾಕ್ತನ, ಪ್ರಾಗ್ಯೈತಿಹಾಸಿಕ, ಬುಡಕಟ್ಟು, ಜಾನಪದ ಪ್ರದರ್ಶಕ ಕಲೆಗಳು, ಆದಿವಾಸಿ ಬದುಕಿನ ಚಿತ್ರ, ಸಮಕಾಲೀನ ಬದುಕಿನ ಚಿತ್ರ, ನೂರಾರು ಆಚರಣೆಗಳಿಗೆ ಪೂರಕವಾಗಬಲ್ಲ ಮಾಹಿತಿಗಳು ಇವೆಲ್ಲವುಗಳ ಮಿಸಳಭಾಜಿಯಾಗಿ ಹೊರಬಂದಿದೆ.

ಕಾಮತರ ಜೀವಿತಾವಧಿಯಲ್ಲಿ ಪೂರ್ಣವಾಗದ ಆಸೆ! ಅವರು ಗತಿಸಿದ ಹತ್ತು ವರ್ಷಗಳ ನಂತರ ತೀರ ಆಕಸ್ಮಿಕವಾಗಿ ಪೂರ್ಣವಾಗಿದೆ. ಹೆಚ್ಚಿನ ಕಲಾಪ್ರೀತಿ, ಅಭಿಮಾನ, ಸಾಹಸ, ಹುಮ್ಮಸ್ಸುಗಳಿಂದ ಕಾಮತರ ಕನಸಿಗೆ (ಗ್ರಂಥ)ರೂಪ ಕೊಟ್ಟ ಡಾ. ಬೈರೇಗೌಡರಿಗೆ ನಾನೂ-ವಿಕಾಸನೂ ಚಿರಋಣಿಯಾಗಿದ್ದೇವೆ. ಕನ್ನಡಕ್ಕೊಬ್ಬರೇ ಕಾಮತರಾಗಿ ಕಲೆ, ವಿಜ್ಞಾನ, ಸಾಹಿತ್ಯಗಳಲ್ಲಿ ಕೆಲವರಿಂದ ಮಿನಿ-ಕಾರಂತರೆನಿಸಿಕೊಂಡ ಕೃಷ್ಣಾನಂದ ಕಾಮತರ ಕಾಯ್ದಿರಿಸಿದ ನೆನಪಿನ ಗಣಿಯ ಕೆಲಮುತ್ತು-ರತ್ನಗಳು ಕನ್ನಡಿಗರ ಮುಂದಿವೆ. ಅವನ್ನು ಪ್ರೀತಿಯಿಂದ ಸ್ವಾಗತಿಸುತ್ತಾರೆಂಬ ಭರವಸೆಯಲ್ಲಿ.

12.10.2012

**ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್**

# ಮರುಮುದ್ರಣಕ್ಕೆ ಎರಡು ಮಾತು

ಕೃಷ್ಣಾನಂದ ಕಾಮತರ ಕೃತಿಗಳಲ್ಲಿ ಪ್ರವಾಸಾಗಾಥವಾದವು ಸಾಕಷ್ಟು ಜನಪ್ರಿಯವಿವೆ. ಮಧ್ಯಪ್ರದೇಶದ ಆದಿವಾಸಿಗಳ ಜೀವನ ಕುರಿತಂತೆ ನಾಲ್ಕು ಕೃತಿಗಳಿದ್ದು, 'ಕುಂಚ ಪ್ರಪಂಚ'ವು ಚಿತ್ರಪ್ರಧಾನವಾಗಿ 2012ರಲ್ಲಿ ಪ್ರಕಟವಾಯಿತು. ಬರಹದ ಇಷ್ಟವಾದ ಅವರ ಛಾಯಾಚಿತ್ರಗ್ರಹಣಕ್ಕಾಗಲೀ, ರೇಖಾಚಿತ್ರಗಳಿಗಾಗಲೀ ಅವರ ಜೀವಮಾನದಲ್ಲಿ ಸಾಕಷ್ಟು ಬೆಳಕು ಕಾಣುವ ಅವಕಾಶ ಒದಗಲಿಲ್ಲ. ಪ್ರಗತಿ ಗ್ರಾಫಿಕ್ಸ್‌ನ ಡಾ. ಎಂ. ಬೈರೇಗೌಡರು, ಕಾಮತರು ರಚಿಸಿದ ಚಿತ್ರಗಳ ಮೇಲೆ ಆಧಾರಿತವಾಗಿದ್ದ ರೇಖಾಚಿತ್ರಗಳ ಮೌಲಿಕತೆಯನ್ನು ಗುರುತಿಸಿದ ಮೊದಲಿಗರು. ಭರದಿಂದ ಬದಲಾಗುತ್ತಲಿರುವ ಬುಡಕಟ್ಟು ಜನಾಂಗದ ಚರಿತ್ರೆಗೆ ಸೇರಿಹೋದ ಚಟುವಟಿಕೆಗಳನ್ನು ಕಾಯ್ದಿರಿಸುವಲ್ಲಿ ಕಾಮತರು ಕೈಕೊಂಡ ಶ್ರಮವನ್ನು ಗುರುತಿಸಿ 'ಕುಂಚ ಪ್ರಪಂಚ-1' ಕೃತಿಯನ್ನು ಪ್ರಕಟಿಸಿದರು. ಈಗ ಅದರ ಮರುಮುದ್ರಣವಾಗುತ್ತಿದೆ. ಪ್ರವಾಸ ಸಾಹಿತ್ಯಕ್ಕೆ ಕನ್ನಡ ಭಾಷೆಯೊಳಗೇ ವಿಶೇಷ ಸ್ಥಾನ ಕಲ್ಪಿಸಿದ ಕೃಷ್ಣಾನಂದ ಕಾಮತರ ಈ ಕೃತಿ ಎಂದಿನಂತೆ ಜನಪ್ರಿಯವಾಗುವ ಭರವಸೆಯಿದೆ.

ಈ ದಿಕ್ಕಿನಲ್ಲಿ ಹೊಸದಾರಿ ತುಳಿದು, ಕಾಮತರ ಕುಂಚಕ್ಕೆ, ಸಾಹಿತ್ಯಕ್ಕೆ ಹೊಸ ಆಯಾಮ ಕಲ್ಪಿಸಿದ ಬೈರೇಗೌಡರಿಗೆ ಕೃತಜ್ಞತೆಗಳು. ಎರಡನೇ ಮುದ್ರಣಕ್ಕೆ ಸಹಕರಿಸಿದ ಎಲ್ಲರಿಗೂ ಋಣಿ.

**11.11.2019**
**ಕನ್ನಡ ರಾಜ್ಯೋತ್ಸವ**

**ಜ್ಯೋತ್ಸ್ನಾ ಕೃಷ್ಣಾನಂದ ಕಾಮತ**





## ಆದಿವಾಸಿ ಮಣ್ಣಿನ ಆಟಿಗೆಗಳು



ಹಂದಿ



ಆಡು



ಕುದುರೆ



ಶಿರವಿಲ್ಲದ ಆನೆ



## ಭಿಲ್ಲರ ದೇವತೆಗಳು



ವನರಾಜ



ಸೈನಿಕ



ತ್ರಿಶೂಲಪಾಣಿ ಈಶ್ವರ



ನಾಲ್ಕು ಕೈಗಳ ದೇವತೆ ಎಡಗೈಯಲ್ಲಿ ಪಾನಪಾತ್ರೆ ಇರಬಹುದೇ?





ಆದಿವಾಸಿ ಕೆತ್ತನೆಯ ಗಿಳಿ



ಬೇಟೆಗಾರನಿಗೆ ಬಲಿಯಾಗಲಿರುವ ನವಿಲು



ಹೂ ಎಲೆಗಳೊಂದಿಗೆ ಒಂದಾಗಿಹೋದ ಹಕ್ಕಿ, ನವಿಲುಗರಿಗಳಲ್ಲಿ ಎಲೆಗಳನ್ನು ಗುರುತಿಸಿ!



## ಆದಿವಾಸಿ ಚರ್ಮವಾದ್ಯಗಳು



ಚಿಕ್ಕ ನಗಾರಿ



ಮೃದಂಗ



ಡೋಲು



ತಮಟೆ







ಖಂಜಿರಾದ ಆದಿಮ ರೂಪಗಳು



## ಆದಿಮಾನವ ಕಲಾಮಾದರಿಗಳು. ಭೀಮ ಬೆಡಕಾ ಗುಹಾಚಿತ್ರಗಳು



ಜಿಂಕೆಯ ರೇಖಾರೂಪ



ರೆಕ್ಕೆ ಬಲಿತ ಕೋಳಿ



ತಾಯಿಯನ್ನು ಹಿಂಬಾಲಿಸುವ ಮರಿ



ರೆಕ್ಕೆ ಬಲಿಯದ ಎಳೆಕೋಳಿ



ತಾಯಿಯನ್ನು ಹಿಂಬಾಲಿಸುವ ಮರಿಗಳು



ತಾಯಿ ಮತ್ತು ಮರಿಕೋಳಿ



ಬಣ್ಣ ತುಂಬಿದ ಜಿಂಕೆ ಒಂದೇ ರೇಖಾವಿನ್ಯಾಸ



ಬೆಕ್ಕು



ಓಡುತ್ತಿರುವ ನವಿಲು





ಜಿಂಕೆಮರಿಯ ಭಗ್ನರೂಪ



ಕಲಾತ್ಮಕ ಕೋಡಿನ ಜಿಂಕೆ



ಜಿಂಕೆ ಆದರೂ ಹೊಟ್ಟೆಯ ಪೊಳ್ಳು
ಹೊಟ್ಟೆಗಿಲ್ಲದ ಸ್ಥಿತಿ ಸೂಚಿಸುತ್ತದೆಯೇ





ಜಿಂಕೆ ಶಿಕಾರಿ



ಕೋಡುಮೂಡದಿದ್ದರೂ ಹಾಯಲು ಹೊರಟ ಕರು!



ಸಾಂಬರ ಜಾತಿಯ ಪ್ರಾಣಿ: ಹುಲ್ಲನ್ನೇ ಆಹಾರವಾಗಿಸಿದ್ದನ್ನು ಆದಿಮಾನವ ಚಿತ್ರಿಸಿದಂತೆ



ಹಚ್ಚೆಯ ವಿನ್ಯಾಸಗಳಿಂದ ಅಲಂಕೃತ ಮಾರಿಯಾ ನಾರಿ; ಉಪಪಂಗಡಗಳನ್ನು ವಿಶಿಷ್ಟ ಪ್ರಕಾರದ ಹಚ್ಚೆಗಳಿಂದ ಗುರುತಿಸಲಾಗುತ್ತದೆ.







ಕೊರ್ಕುನಾರಿ: ಹಚ್ಚೆಗಳು ಪಶು–ಪಕ್ಷಿಗಳನ್ನು ಪ್ರತಿನಿಧಿಸುತ್ತವೆ. ಕೊರ್ಕು ಆದಿವಾಸಿಗಳು ಅತ್ಯಂತ ಬಡತನದಲ್ಲಿ ಕಾಡಿನ ಆಹಾರವನ್ನೇ ಅವಲಂಬಿಸಿದವರು.







ಬೇಟೆಯ ದೃಶ್ಯ



ಪ್ರಾಣಿ



ಮೊನಚಾದ ಬಾಣ





ಬಿಟ್ಟ ಬಾಣಗಳು ಸರಿಯಾಗಿ ನಟ್ಟಾಗ ಸಂಭ್ರಮ ಪಡುವವರು ಅರ್ಧವರ್ತುಳದಲ್ಲಿ!





ಮೊಲ, ಸರೀಸೃಪ, ಎರಳೆ, ಮೀನು, ಜಿಂಕೆಗಳೆಲ್ಲ ಆದಿವಾಸಿಗಳಿಗೆ ನಿಕಟವರ್ತಿಗಳಾಗಿದ್ದವು.



ಆದಿಮ ಚಿತ್ರಕಾರನ ಜಿಗರೆಯ ಹೊಟ್ಟೆಯಲ್ಲಿ ಹುಲ್ಲು, ಜಲದ ಪ್ರಾಣಿಗಳು. ಹುಲ್ಲೆಯ ಹೊಟ್ಟೆಯಲ್ಲಿ ಆನೆ ಇವೆಲ್ಲ ವಿನೋದ ಚಿತ್ರಗಳಿರಬಹುದು





ಗಬ್ಬದ ಕಾಡೆಮ್ಮೆ ಬೇಟೆಯ ದೃಶ್ಯಗಳು



ಬೇಟೆಯ ವಿವಿಧ ಉಪಕರಣಗಳು. ಹಿಂಡುಗಳನ್ನು ಹೆದರಿಸಿ ಚದುರಿಸಲು ಬೇಟೆಗಾರರು (ಪಡೆ) ತಯಾರಾಗುತ್ತಿದ್ದರು.



ಕಾಡಾಕಳನ್ನು ಪಳಗಿಸಿ ಮಾನವ ಅವುಗಳ ಬೆಳವಣಿಗೆಯ ವಿವಿಧ ಹಂತವನ್ನು ಕಾಣಿಸಲು ಯತ್ನಿಸಿರಬಹುದೇ!







ಚಕ್ರ ಅಥವಾ ಬೂಮರಾಂಗವನ್ನು ಹೋಲುವ (ಗುರಿಯಿಟ್ಟು ಬೀಸಿದಾತನ ಬಳಿಗೆ ತಿರುಗಿ ಚಕ್ರ ಬರುವ ರೀತಿ. ಭೀಮಬೆಡಕಾದ ಹಲವು ಚಿತ್ರಗಳಲ್ಲಿವೆ.







ಗುರುತಿಸಲಾಗದ ಪ್ರಾಣಿ. ಮನುಷ್ಯ(?). ಪಕ್ಷಿ

















ಬೇಟೆಯ ದೃಶ್ಯಗಳು





ಕೋಡುಗಳ ಪ್ರದರ್ಶನ. ಹುಲ್ಲೆಯ ಕಾಲುಗಳನ್ನು ಮೆಟ್ಟಿ!



ಜೇನುಹುಟ್ಟಿಗೆ ಲಗ್ಗೆ



ನಾಯಿಯಿಂದ ಹುಲ್ಲೆಯ ಬೇಟೆ



## ಮುರಿಯ ಮಹಿಳೆಯ ಅಲಂಕಾರಗಳು

ಕಾಲಂದುಗೆಗಳು, ಕೈಗೆ ಆನೆ ದಂತದ ಬಳೆಗಳು, ತೆರೆದ ಮೈ ಭಾಗವೆಲ್ಲ ಮುಚ್ಚುವ ಹಚ್ಚೆಯ ವಿನ್ಯಾಸಗಳು







ಹಚ್ಚೆಯ ವಿನ್ಯಾಸಗಳು, ಬಳೆಗಳು, ಕಾಲ್ಗಳಗಳಲ್ಲೂ



ಆದಿವಾಸಿ ದೇವತೆ











ವಿವಿಧ ಬಳೆಗಳ ವಿನ್ಯಾಸಗಳು



ಕಡಗ ಅಥವಾ ತೋಳ್ಬಂದಿಗಳು





















'ಘರೇವಾರ' ಒಡವೆ ಮತ್ತು ಚಿಗರ ಕೈ ಮತ್ತು ಕಾಲಿನವು





ಬೇಟೆಯ ತಯಾರಿ ಮತ್ತು ವಿಜಯೋತ್ಸವದ ದೃಶ್ಯ

ಜಿಂಕೆ ಕೋಡುಗಳ ಕಲಾತ್ಮಕ ರೂಪ













ಆದಿಕಾಲದ ತಂಡ ಜಿಂಕೆಗಳ ವಿವಿಧ ರೂಪಗಳು





ತಾಯಹಾಲು ಈಂಟುತ್ತಿರುವ ಮರಿಯೊಂದಿಗೆ ತಾಯ ರೇಖಾ ವಿನ್ಯಾಸ ಅದ್ಭುತ!







ಕುಣಿತದ ಭಂಗಿಗಳು



ರಿಂಗ್ ಮತ್ತು ತರೆಯಿರಬಹುದೇ?



ಆದಿವಾಸಿ ಚಿಕಿತ್ಸೆ –ಶಿಲಾಚಿತ್ರಗಳು







ಬೇಟೆಯ ಪೂರ್ವಭಾವಿ ತಯಾರಿ



ಜಿಂಕೆಯ ರೇಖಾಚಿತ್ರ



ವೀರಗಲ್ಲಿನ ಮೇಲಿನ ಸಾಲು





ವೀರಗಲ್ಲಿನ ಚಿತ್ರವಿನ್ಯಾಸದ ಅಂಚು





ಪರ್ಣಭಕ್ಷಕ





ನವಿಲು, ಕೋತಿ, ಗಿಳಿ, ಬಕ, ನಾಯಿ ಹಲ್ಲಿ





ಬೇಟೆಯ ದೃಶ್ಯಗಳು

ಒಂದೆಡೆ ಮೃಗವೊಂದನ್ನು ಬಂಧಿಸಿದ ಬಗೆ.







ಢಾಲುಹಿಡಿದು ಹೊರಟ ಕಟ್ಟಾಳುಗಳು



ಹುಲ್ಲೆಗಳ ಹೊಟ್ಟೆಯಲ್ಲಿ ಕಲ್ಪಿಸಿಕೊಂಡ ನೋಟಗಳು



ಜೇನುಹುಟ್ಟು

ಬಿಲ್ಲುಗಾರ ಬಾಣಬಿಡುವ ಸಿದ್ಧತೆಯಲ್ಲಿ



ಜಿಂಕೆಯ ಸಾಲುಗಳು



ಭಲ್ಲೆಯಿಂದ ಕಾಡುಹಂದಿಯ(?) ಬೇಟೆ





























ಗೊಂಡ ಯುವತಿ ಮತ್ತು ಆ ತಂಡದಲ್ಲಿ ಪ್ರಚಲಿತ ಇದ್ದ ಹಚ್ಚೆಯ ಪ್ರಕಾರಗಳು.







'ಒರಾವೊ' ಒರಿಸ್ಸಾ–ಮಧ್ಯಪ್ರದೇಶ ನಡುವಣ ನೆಲೆಯ 'ಉರವ' ಜನಾಂಗ ಹೋಲುವ ಪಂಗಡದ ಯುವತಿ



















































ಹಚ್ಚೆಯ ಪ್ರಕಾರಗಳು, ಹರಕೆ.
ಪ್ರಾರ್ಥನೆಗಾಗಿ ಚುಚ್ಚಿಸಿಕೊಳ್ಳುತ್ತಾರೆ.
ವೀರಗಲ್ಲುಗಳಲ್ಲೂ ಕಂಡು ಬರುತ್ತವೆ.





## ಬೇಟೆಗೆ ಹೊರಟ ವೀರರು





ಇಬ್ಬರೂ ಮುಖಂಡರೆಂದು ಅಶ್ವಾರೋಹಿಯಾಗಿ ತೋರಿಸಲಾಗಿದೆ. ವೀರಗಲ್ಲುಗಳ ಮೇಲೆ ಇಂಥ ಚಿತ್ರಗಳು ಸಾಮಾನ್ಯ.





## ವೀರಗಲ್ಲುಗಳ ಚಿತ್ರಗಳು







ಕಾಳಗಕ್ಕೆ ಹೊರಟವರು







ಕುದುರೆಗಳನ್ನು ಸಾಗಿಸುವವರು



ಗೆದ್ದ ಕುದುರೆಯನ್ನು ಬಲವಂತವಾಗಿ ಸಾಗಿಸುವವರು.





ಕುದುರೆ ಪಡೆ



ಕಾಳಗದ ದೃಶ್ಯಗಳು



ಜಿರಾಫೆಯನ್ನು ಹೋಲುವ ಪ್ರಾಣಿ. ಈಗ ನಾಮಾವಶೇಷ

ಸಾಕುಪ್ರಾಣಿಯೊಂದಿಗೆ

ಮಲ್ಲಯುದ್ಧ ಬಿಲ್ಲುಗಾರಿಕೆಯ ತರಬೇತಿ



ಸಾಕಿದ ಕಾಡುಪ್ರಾಣಿ (?) ಆನೆ



## ಹೊಯ್ಸಳ ಶಿಲ್ಪಗಳ ಆಧಾರಿತ ರೇಖಾಚಿತ್ರಗಳು



ಯುವತಿ ಮತ್ತು ಆನೆ ಸರಪಳಿ



ನವಿಲ ಬಕ, ಗಿಣಿ, ಆಕಳು, ಆನೆ, ಕೋತಿ











ಹೊಯ್ಸಳರ ನಾಣ್ಯಗಳು

ಬೇಟೆಗೆ ಮುನ್ನ ಮುಖವಾಡ ಧರಿಸಿ ನೃತ್ಯ



## ಶತಮಾನಗಳಲ್ಲಿ ಕನ್ನಡಿಗರು ಬಳಿಸಿದ ಮಂಚಗಳು








ಜ್ಯೋತ್ಸ್ನಾ ಕಾಮತರ ಸಾಮಾಜಿಕ ಇತಿಹಾಸದ ಪ್ರಬಂಧ "ಕನ್ನಡಿಗರ ಮಂಚಗಳು" ಅಧ್ಯಾಯಕ್ಕೆ ಕಾಮತರು ಮೂಲ ತೈಲಚಿತ್ರಗಳ ಆಧಾರದ ಮೇಲೆ ರಚಿಸಿದ ರೇಖಾಚಿತ್ರಗಳು.



ಪಶುಗಳನ್ನು ಗುರುತಿಸಲು ಪಕ್ಷಿಗಳನ್ನು ತರಬೇತುಗೊಳಿಸುತ್ತಿದ್ದರೆ?



ಬೇಟೆಯ ದೃಶ್ಯ















ಬೇಟೆಯ ದೃಶ್ಯಗಳು ಮತ್ತು ಬೇಟೆಯಾಡಲ್ಪಡುತ್ತಿದ್ದ ಪ್ರಾಣಿಗಳು



ಆ ಯುಗದ ವನ್ಯಪ್ರಾಣಿಗಳ ರೇಖಾಚಿತ್ರಗಳು (ಪೂರ್ವಶಿಲಾಯುಗ)



ಇಲಿಗಳ ಬಾಧೆ ಹತ್ತಿಕ್ಕಲು ಅಂದಿನ ಯಂತ್ರ, ಮತ್ತು ಬಾಣಗಳ "ತರಕಸ್" (ಬತ್ತಳಿಕೆ)







ಬೇಟೆಯ ದೃಶ್ಯ



ಗುರಿಯಿಡಲು ತರಬೇತಿ





ಬೇಟೆಯ ಪ್ರಕ್ರಿಯಾ ಭೂಮಿಗೆ ಹಗ್ಗ ಹಿಡಿದು ಅಳತೆ ಮಾಡುತ್ತಿರಬಹುದೇ?





ಪ್ರಾಕ್ ಶಿಲಾಯುಗದ ಚಿತ್ರ

















ಪಳಗದ ಕೈಯ ರೇಖಾಚಿತ್ರಗಳು





ಅಶ್ವಾರೋಹಿ ಭಾಗ್ಯವಂತರು! (ವೀರಗಲ್ಲಿನ ನೆರಳು ಚಿತ್ರ)



ಮರ, ಕಲಾವಿದನ ಕುದುರೆ ಮತ್ತು ಸವಾರ!





ವೀರಗಲ್ಲಿನ ಚಿತ್ರಫಲಕ ನೃತ್ಯ ಬೀಳ್ಕೊಡುವಿಕೆಯಿಂದ ಮೇಲಕ್ಕೆ ಚಂದ್ರ ಸೂರ್ಯರ ನಾಡಿಗೆ ಏರಿದ ವೀರ!





ಆದಿವಾಸಿ ವೀರಗಲ್ಲು, ಯುದ್ಧ ದೃಶ್ಯ



ವಧುವರರೊಂದಿಗೆ ತಾಯಿ-ತಂದೆ?







ಮರದಿಂದ ಹಣ್ಣು ಪಡೆಯುವ ಕ್ರಿಯೆ



ಹುಲ್ಲೆ ಸವಾರಿ





ಕಾಲ್ಪನಿಕ ಕೊಂಬುಗಳು









ಮುಳ್ಳುಹಂದಿ



ಚುಕ್ಕಾಗಿ ಕಾಣುವ ಹುಲಿ



ವೀರಗಲ್ಲು ಮೃತನಿಗೆ ಆಹಾರ ಒಯ್ಯುವ ದೃಶ್ಯ











ಶಿಲೆಯಲ್ಲಿ ಕೊರೆದ ಮತ್ಸ್ಯಾಕೃತಿಗಳು























ಕಿವಿಯ ಕೊಪ್ಪುಗಳು



ಕಾಲಿನ ಒಡವೆಗಳು, ಕಾಲ್ಬೆರಳಿಗೂ ಒಂದೊಂದು ಮುಚ್ಚುಂಗುರ



ಕಿವಿಯ ಕೊಪ್ಪುಗಳು, ಕಾಲಿನ ಒಡವೆಗಳು, ಕಾಲ್ಬೆರಳಿಗೂ ಒಂದೊಂದು ಮುಚ್ಚುಂಗುರ



ಜೇನು ಸಂಗ್ರಹದ ಹಂತಗಳು (ಶಿಲಾಯುಗದ ಚಿತ್ರ)



ಕೀಟ ಸಂಸಾರ: ಗಂಡು ಕೃಶಾಂಗ: ಆತನ ಹತ್ತುಪಟ್ಟು ದೊಡ್ಡ ಮೀಸೆ ಹೊತ್ತ ಗೆದ್ದಲು ರಾಣಿ ಪತ್ನಿ.





ಸೋಮಾರಿ ಗಂಡುಕೀಟ ಪತಿಯನ್ನು ಹೊಡೆದೋಡಿಸುವ ಹೆಣ್ಣು ಜೇನು





ಪೂಜೆಗೆ ಒಲಿದು ಧಾನ್ಯ ಉಗುಳುತ್ತಿರುವ ದೇವತೆ



ಚೆಲುವುಗೊಂಬಿನ ಕೃಷ್ಣಮೃಗ



ಜಿಂಕೆ ಎಳೆಯುತ್ತಿರುವ ಬಂಡಿ!



ಆದಿವಾಸಿ ನವಿಲಿನ ಸಂಕೇತ







ಸಾಮೂಹಿಕ ಬೇಟೆ



ಸಾಮೂಹಿಕ ನೃತ್ಯ ಈಗಲೂ ಕೈ ಕೈ ಹಿಡಿದು ನರ್ತಿಸುವುದು
ಬಸ್ತರ್ ಆದಿವಾಸಿಗಳಲ್ಲಿ ಸಾಮಾನ್ಯ













ಮುಸುಕು ಮುಖವಾಡಗಳು



ಸುಸಜ್ಜಿತ ಬೇಟೆ ಪಡೆ









ವೀರಗಲ್ಲುಗಳ ಮೇಲೆ ಕೆತ್ತಿದ ಚಿತ್ರಗಳು







ಅಶ್ವಾರೋಹಿಗಳು (ಕಾಷ್ಠ ಶಿಲ್ಪ)



ಬೇಟೆಯ ದೃಶ್ಯ (ಶಿಲಾಚಿತ್ರ)



ಬೇಟೆಗಾಗಿ ಕಾಳಗ? (ಶಿಲಾಚಿತ್ರ)







'ಕಾವಡಿ' ಪ್ರಾಚೀನತಮ ವಾಹಕ
ಇಂದಿಗೂ ಕಾಡುಕುವರರ ಜೀವಾಳ!



ಮುಖವಾಡಗಳು: ಹರಕೆ ಒಪ್ಪಿಸಲು, ಭೂತಗಳನ್ನು ಸಂತೃಸಲು ಮುಖವಾಡ ಧರಿಸಿದ ನೃತ್ಯಗಳು ಸಾಮಾನ್ಯ















ಇದೇ ನನ್ನ ಸರ್ವಸ್ವ
ಬುಟ್ಟಿಯಲ್ಲಿ ಸಾಮಾನು ಸೊಂಟದ ಮೇಲೆ ಮಗು
ಜೊತೆಗೆ ಮಾರಲೆಂದು ತಂದ ಕುರಿ, ಸಂತೆಗೆ ಹೊರಟ
ಮುರಿಯಾ ನಾಡಿ



ಆಹಾರ ಸರಪಣಿ
ಭೂಮಿಯಲ್ಲಿ ಒಂದು ಪ್ರಾಣಿ ಇನ್ನೊಂದು
ನುಂಗುವುದು ನಿಸರ್ಗ ನಿಯಮ, ಇದನ್ನರಿತ
ಯತಿ ಸ್ಥಿತಪ್ರಜ್ಞನಾಗಿ ವೀಕ್ಷಿಸುತ್ತಿದ್ದಾನೆ.
(ಬೇಲೂರಿನ ಹೊಯ್ಸಳ ಕಾಲೀನ ಶಿಲ್ಪ)









ಕಾಡೆಮ್ಮೆ ಕೋಡಿನ ಮಾರಿಯರು ದಂತೇಶ್ವರಿಯನ್ನು ಮೆಚ್ಚಿಸಲು ತುರಾಯಿ ಕಟ್ಟಿದ ಮುಖವಾಡ ಧರಿಸಿ ಡೋಲು ಬಾರಿಸಿ ಕುಣಿಯುತ್ತಾರೆ. ಅದನ್ನು ಸಂಕೇತಿಸುವ ಚಿತ್ರ.





ಆಧುನಿಕ ಹುಲಿ ಬೇಟೆ: ಆದಿವಾಸಿ ಕಲ್ಪಿಸಿಕೊಂಡಂತೆ















ಕರಂಡಕಗಳು, ಮಣ್ಣಿನ ಹೂಜಿಗಳು













ಆದಿವಾಸಿಗಳು ದೈನಂದಿನ ಉಪಯೋಗಕ್ಕೆ ಅಲ್ಯುಮಿನಿಯಂ ಮತ್ತು ಮಣ್ಣಿನ ಪಾತ್ರೆಗಳು,
ನೀರು ಒಯ್ಯಲು 'ತುಂಬಾ'ಗಳನ್ನು ಅವಲಂಬಿಸುತ್ತಾರೆ





ಘೋರ ಬಡತನವಿದ್ದರೂ ಅವರ ಪ್ರಾಣಿವಾತ್ಸಲ್ಯಕ್ಕೆ ಕೊರತೆಯಿಲ್ಲ ನಾಯಿ, ಬೆಕ್ಕುಗಳೊಂದಿಗೆ ನವಿಲು, ಗಿಣಿ, ಮೈನಾಗಳನ್ನೂ ಸಾಕುತ್ತಾರೆ. ಸಾಕುಪ್ರಾಣಿಗಳ ಚಿತ್ರಗಳನ್ನು ಬಿಡಿಸುವದೂ ಅವರಿಗೆ ಇಷ್ಟ!





ಸಂತೆಗೆ ಹೊರಟ ನಾರಿ. ತಲೆಯ ಮೇಲಿನ ಬುಟ್ಟಿಯಲ್ಲಿ ಮನೆಯಲ್ಲಿ ಬೆಳೆದ ತರಕಾರಿ. ಕೋಳಿ ಮೊಟ್ಟೆ, ಕೈ ಖಾಲಿ ಇಲ್ಲದಿದ್ದರೆ ಕೈಸೂಸನ್ನೂ ಮಲಗಿಸಿ ಒಯ್ಯುವುದೂ ಇದೆ!





ಅತ್ಯಲ್ಪ ಬಟ್ಟೆ, ಅಲ್ಪ ಆದಾಯ, ಒಡವೆ–ಅಲಂಕಾರ–ಪರಿಕರಗಳಿಲ್ಲದಿದ್ದರೂ ಆದಿವಾಸಿ ಮಹಿಳೆ ಅಲ್ಪತೃಪ್ತಳು!



ಕನ್ನಡ ಅರಸರ ವಿವಧ ಲಾಂಚನಗಳನ್ನು ಮರೆಸುವ ಶಿಲ್ಪಗಳಿದ್ದಂತೆ ಢಾಲುಗಳೂ ಇವೆ.



ಗಂಗರ ಆನೆ



ಹೊಯ್ಸಳರ ಸಿಂಹ



ಮೈಸೂರು ಒಡೆಯರ
ಗಂಡಬೇರುಂಡ



ವಿಜಯನಗರ ವರಾಹ





ಕಾವಡಿಯಲ್ಲಿ ವಿವಿಧ ಸಾಮಗ್ರಿ ಹೊತ್ತು ದೂರದೂರಿಗೆ
ಹೊರಟ ಮುರಿಯ ಯುವಕ



ತನ್ನವರು ಮರಹತ್ತಿ ಹಣ್ಣು
ಕೀಳುತ್ತಿರುವಾಗಲೇ ಮರದ ಬುಡಕ್ಕೆ
ಕೊಡಲಿಯಿಟ್ಟ ದುಷ್ಟ ಮಾನವ



ಸಮೃದ್ಧವಾಗಿ ಫಲಗಳನ್ನು ಪೂರಥಸುವ
ಮರಕ್ಕೆ ಮಾರಕವಾಗಿರುವ ನರಪ್ರಾಣಿ

ಶ್ರವಣ ಬೆಳಗೊಳದ ಜೈನಮಠದ ಭಿತ್ತಿಚಿತ್ರ ಆಧಾರಿತ





ವಿಶೇಷ ನೃತ್ಯಭಂಗಿಯಲ್ಲಿ ನರ್ತಕಿಯರು ಕೈಕಾಲು ಏಕಪ್ರಕಾರವಾಗಿ ಮಣಿಸುತ್ತ ಇಳಿದನಿಯಲ್ಲಿ ಎಲ್ಲರೂ ಗುಣಗುಣಿಸುತ್ತಲೇ ಮಳೆಯ ಪರಿವೆ ಇಲ್ಲದೇ ಕುಣಿಯುವದು ಇವರ ಸಾಮೂಹಿಕ ನೃತ್ಯದ ವೈಶಿಷ್ಟ್ಯ!













ಬೆಣಚುಕಲ್ಲಿನಿಂದ ಕಿಡಿಹೊತ್ತಿಸಿ ಅಡುಗೆ ಮನೆಯಲ್ಲಿ ನಂದದ ಹಾಗೆ ಬೆಂಕಿಯನ್ನು ಮಂದವಾಗಿ ಉರಿಸುತ್ತಾರೆ! ತಂಬಾಕು ಪ್ರಿಯ ಆದಿವಾಸಿಗಳಿಗೆ ಒಂದು ಬೀಡಿ ಹೊತ್ತಿಸಲು ಚಿಕ್ಕ ಕೊರಡು ಉರಿಸಿದರೂ ವ್ಯತ್ಯಾಸವಿಲ್ಲ. ನಿಸರ್ಗಮಾತೆ ಒಂದೊಮ್ಮೆ ಧಾರಾಳವಾಗಿ ಉರುವಲು ಪೂರೈಸುತ್ತಿದ್ದಳಲ್ಲವೇ?







ಕಮ್ಮಾರರ (ಅಗೇರಿಯಾಗಳ) ಭಾವಣಿ ಕುಲುಮೆಯಲ್ಲಿ ಬೆಂಕಿ

ಕಟ್ಟಿಗೆ ಕೆಲಸ ನಿರತ ಬಡಗಿಗಳು.

ಸುಖಶಯ್ಯೆ

ಕೆಲಸ ಮಾಡಿಸಿಯೇ ಸುಖಿಸುವ 'ಮುಖಿಯಾ'







ನೃತ್ಯಕ್ಕೆ ಸಿದ್ಧಳಾದ ಹರೆಯದವಳು



ಕುಕ್ಕುರುಗಾಲಲ್ಲೇ ಮುಕ್ಕಾಲು ಆಯುಷ್ಯ ಕಳೆದವಳು



ಸಲಿಕೆ, ಗುದ್ದಲಿ ತಾನೇ ಸರಿಪಡಿಸಿಕೊಳ್ಳುವ ಕೃಷಿಕ



ದೊನ್ನೆಯಲ್ಲಿ ಮರದ ಸೌಟಿನಿಂದ 'ಲಾಂದಾ' (ಸೆರೆ) ಸವಿಯುತ್ತಿರುವ ಯುವಕ





## ಕರ್ನಾಟಕದ ಶಿಲ್ಪಗಳಲ್ಲಿ ಕಾಣುವ ಮಂಚಗಳು

ಸಾದಾ ಕಟ್ಟಿಗೆಯ ಮಂಚಗಳು. ಉಕ್ಕಿನ ಕಾಲುಗಳ ಗಟ್ಟಿಮರದವು, ವೀಳ್ಯ, ಪಾನೀಯಗಳು ಮರದಡಿ ಇವೆ.
ಮೆತ್ತನ್ನ ಹಾಸಿಗೆ ಮತ್ತು ಚಿತ್ರಿತ ಹಾಸುಹೊಂದಿದ 'ಸೆಳೆಮಂಚಗಳು'
ಪಾನ್‌ದಾನ. ಹಣತೆಯಿದ್ದ 'ಗದ್ದುಗೆ ಮಂಚ' ದಪ್ಪ ಹಾಸಿಗೆಯ 'ಗುಜ್ಜರಿಗಾಲಿನ ಮಂಚ'

ಜ್ಯೋತ್ಸ್ನಾ ಕಾಮತರ ಪ್ರಬಂಧ: 'ಶಿಲ್ಪ ಕಾವ್ಯ, ಭಿತ್ತಿಚಿತ್ರಗಳಲ್ಲಿ ಮಂಚ' ಲೇಖನಕ್ಕೆ ಒದಗಿಸಿದ ರೇಖಾಚಿತ್ರಗಳು

















ಪಕ್ಷಿಗಳ ಮೌನ ಸಂಭಾಷಣೆ

















ಊಟಕ್ಕೇನು ಮಾಡೋಣ?

















ಹಕ್ಕಿಯ ಕೊಕ್ಕಿನ ವಿನ್ಯಾಸಗಳು









ಬೆತ್ತದಿಂದ ನಿರ್ಮಿತವಾದ ಹಗುರ ಚಕ್ರಗಳ ಗೊಂಡರ ಚಕಡಾಗಳು



ಸೆರಗಿನ ಸುತ್ತೇ ಮಗುವಿಗೆ ಶ್ರೀರಕ್ಷೆ





ಕಡುಹಸಿರು ಗಿಣಿಯೊಡನೆ ಫರೇಪಾ ತರುಣಿ





ಇಡೀ ದಿನ ಬರಿಮೈ, ಬರಿದಲೆಗಳ 'ಅಗೇರಾ'ಗಳು ಹೊರ ಹೊರಟಾಗ ತಲೆಗೆ ರುಮಾಲು.





ಗ್ರಾಮನಾರಿಯರ ವಿಚಾರ ವಿನಿಮಯ



ಹೆಗಲಮೇಲ್ ಚಿಕ್ಕ 'ಟಾಂಗಿ' ಕೊಡಲಿ ತಲೆಗೆ ರುಮಾಲು ಅದಕ್ಕೆ ಸಿಗಿಸಿದ ಬಣ್ಣ ಬಣ್ಣದ ಗರಿಗಳು. ಚಿಕ್ಕ ಕನ್ನಡಿಗಳು ಇದು ಮುರಿಯನ 'ಫ್ಯಾಶನೆಬಲ್' ಉಡುಪು.





ಚಿಕ್ಕಂದಿನಿಂದಲೇ ಬಿಲ್ಲುಬಾಣಗಳ ತಯಾರಿಕೆ ಮತ್ತು ಪ್ರಯೋಗಗಳನ್ನು ಯುವಕರು ರೂಢಿಸಿಕೊಳ್ಳುತ್ತಾರೆ











ಮೇಲುನೋಟಕ್ಕೆ ಒಂದೇ ಕಂಡರೂ ಮಾರಿಯ, ಮುರಿಯ, ದಂಡಾಮಿ ಮಾರಿಯರು, ಹಲ್ಬಿ, ಸುಂಡಿ, ಕೊರ್ಕು, ಮವಾಸಿಯ ಪಂಗಡಗಳ ಮಹಿಳೆಯರ ಭಾಷೆ ಅಲಂಕಾರ, ಕೂದಲು ಕಟ್ಟುವ ಬಗೆ, ಒಡವೆಗಳ ವಿನ್ಯಾಸ ಭಿನ್ನವಾಗಿರುತ್ತವೆ. ಎತ್ತರ ಕಡಿಮೆ ಇದ್ದರೂ ಸುಂದರ ಮೈಮಾಟದ ಚೆಲುವೆಯರು. ಒಂದಿಷ್ಟೂ ಕೊಬ್ಬು ಇಲ್ಲದ ಕಂದು ಮೈಬಣ್ಣ ಮಿರಿ ಮಿರಿ ಮಿಂಚುತ್ತಿರುತ್ತದೆ. ಕುಂಕುಮ ಧರಿಸುವ ಪದ್ಧತಿಯಿಲ್ಲ.











ಛಿಂದವಾಡಾದ ಗೊಂಡಮಹಿಳೆಯರು ಕುಂಕುಮ, ರವಿಕೆ ಧರಿಸುತ್ತಾರೆ. ಬಣ್ಣ ಕಡುಗಪ್ಪು, ಅಗಲಮೂಗು, ದಪ್ಪ ಬೆಳ್ಳಿಯ ಆಭರಣಗಳು ಇವರ ವೈಶಿಷ್ಟ್ಯ.











ಗೊಂಡ ಮಹಿಳೆಯರು ತುಂಬಜನ ಗಂಟುಮಾಲೆ? ರೋಗದಿಂದ ಬಳಲುತ್ತಾರೆ.







ಆದಿವಾಸಿ ನೃತ್ಯದ ಇನ್ನೆರಡು ಭಂಗಿಗಳು



ಘೋಟುಲ ಕಟ್ಟಡಗಳು, ಚಮೇಲಿ, ಬಸ್ತರ, ಮಧ್ಯಪ್ರದೇಶ (12.10.1976)



ಬೆಚ್ಚಗಿನ ಕಿರುಮನೆ



ವಿಶಾಲವಾದ ಬೈಠಕಖಾನೆ



ಬೈಠಕಖಾನೆ ಎದುರಿನಿಂದ ನೋಡಿದಾಗ

ಭಾಂಕೇರದ ಘೋಟುಲ ಬಸ್ತರ



ಕಾಡುಪ್ರಾಣಿಗಳಿಂದ ರಕ್ಷಿಸಲು ಗಟ್ಟಿಮುಟ್ಟಾದ ಬೇಲಿ







ಕೊರಡು ಗಂಟೆ ಹೊತ್ತ ಹುಲ್ಲಿನ ಛಾವಣಿಯ ಮುಖ್ಯ ಕಟ್ಟಡ

ತಾಳೆಗರಿಗಳ ಕೊಡೆ









ಗಂಜಿಯೂಟ ಹೊತ್ತ ಸ್ವಯಂಪೂರ್ಣ ಯುವಕರು







ಮನೆಗೆಲಸ ಮುಗಿಸಿದ 'ಭಾಂಕೇರ' ಗ್ರಾಮದ ನಿರಾಳ ಮಹೆಳೆಯರು





ಕೆಂಗಲು ತುಂಬ ಸಾಮಾನು ಹೊತ್ತ ಕಿರಿಯ

ಎಣಿಸಿ ನೋಡಿದರೆ ಏಳೇ ಏಳು





ಪಾತ್ರೆಗಳ ಹೊಂದಾಣಿಕೆ






ಹೊರೆಹೊತ್ತು ಕೈ ಬೀಸುತ್ತ ದೂರದೂರಿಗೆ ಹೊರಟವರು

ಸಮೂಹ ನೃತ್ಯದ ತಯಾರಿಯಲ್ಲಿ



ಕುಚ್ಚುಗೊಂಡೆಗಳ ಕೋಡಿನ ಆಭರಣ



ಸಂತೆಗೆ ಹೊರಟ ದಂಡಾಮಿ ನಾರಿಯರು





ಕಾಡಿನ ಮಕ್ಕಳಿಗೆ ಜೋಡಿಯಾಗಿ ಕಾಡಿನಲ್ಲಿ ಅಲೆಯುವ ಹಂಬಲ (ಜಗದಲಪುರ.4.10.1976)







ಕೈಕೊಂಬು ಕಹಳೆ
ಆದಿವಾಸಿ ವಾದ್ಯಗಳು



ಮರವೇರುತ್ತಿರುವ ಮಾನವಾಕೃತಿಗಳು. ಪ್ರಾಚೀನತಮ ಮಾನವನಿಗೂ ಅಭಿವ್ಯಕ್ತಿ ಮಾಧ್ಯಮವೊಂದು ಬೇಕೆನಿಸಿತ್ತು!





























ರೇಖೆಗಳಲ್ಲಿ ಅಂದಿನ ವಾಹನ ವಿನ್ಯಾಸ ಚಿತ್ರಿಸಲು ಹವಣಿಸಿದ ಕಲಾಕಾರನ ಪ್ರತಿಕೃತಿಗಳು





ಹಿಡಿದ ಹೆಬ್ಬದಿಲಿಗಳ ಹೊತ್ತು ಸಂಭ್ರಮದಿಂದ ಹೊರಟವ! (ಈ ಇಲಿಗಳು ಆದಿವಾಸಿಗಳ ಆಹಾರವೂ ಹೌದು)





















ಬಿದಿರು ಕಟ್ಟಿಗೆ ಥಾತುಗಳಲ್ಲಿ ಮೂಡಿಬರುವ ವಿವಿಧ ಡಿಝೈನ್‌ಗಳು



ತಾನೇ ತಯಾರಿಸಿದ ಕೊಳವೆಯುದ್ದದ ಕೊಳಲು ನುಡಿಸುವ
ಕವಡೆಗಳ ಉಡಿಗೆ-ತೊಡಿಗೆಯಲ್ಲಿ ಮುರಿಯ ಯುವಕ.





'ಟಾಂಗಿ'(ಕೊಡಲಿ) ಈ ಆದಿವಾಸಿಗಳ ಆಯುಧವೂ ಹೌದು. ಅಲಂಕಾರವೂ ಹೌದು!



ಹಕ್ಕಿಯನ್ನು ಅನುಕರಿಸಲು ಇನ್ನಷ್ಟು ಗರಿಗಳು ಬೇಕಿತ್ತು! ಬಣ್ಣದ ಗರಿಗಳು ಗಂಡಸು ಹೆಂಗಸರಿಗೆಲ್ಲ ಅತ್ಯಂತ ಶೃಂಗಾರ ವಸ್ತು.















ನೀರಿಗೇ ಆಗಲಿ. ಮನೆವಾಳ್ತಿಗೇ ಆಗಲಿ ಆದಿವಾಸಿ ಹೆಣ್ಣಿಗೆ ಓಡಾಟ ತಪ್ಪಿಲ್ಲ







ವಾರದ ಸಂತೆಗೆ ಸಡಗರದಿಂದ ಹೊರಟವರು



ಆದಿವಾಸಿಗಳ ಕಮ್ಮಾರರಾದ 'ಅಗೇರಿಯ'ಗಳು





ಸಂತೆಗೆ ಹೊರಟವರ ಇನ್ನೊಂದು ನೋಟ



ಹಕ್ಕಿ, ಮೀನು ಮುಂತಾದ ಜೀವಿಗಳನ್ನು ಕಲಾಕೃತಿಯಾಗಿಸಲು ಆದಿಮರು ಹವಣಿಸಿದರು.











ಆದಿವಾಸಿ ಸ್ತ್ರೀ ಶಕ್ತಿ!





ಸ್ಕರ್ಟ್ ಹೋಲುವ ಕಿರುಸೀರೆಯುಳ್ಳ ಹೆಂಗಳೆಯರು. ಜಗದಲಪುರದ ಹೊರಾಂಗಣದಲ್ಲಿ.



ಬಾಲಿಕಾ ಕೂದಲ ಗಂಟು ಇವರ ವೈಶಿಷ್ಟ್ಯ.



ಬೀಸುನಡಿಗೆಯ ಖ್ಯಾತರು





ಆದಿವಾಸಿ ಅಲಂಕಾರಗಳು. ಹಗುರವಾದ ತಗಡಿನ, ಬೆಂಡಿನ ಕಿವಿ, ಕೊರಳ ಆಭರಣಗಳು. ವಿಶೇಷ ಸಂದರ್ಭಗಲಲ್ಲಿ ಧರಿಸಿದರೂ ದೈನಂದಿನ ಕೆಲಸಗಳಲ್ಲಿ ಬರಿಮೈಯಿಂದ ಇರುತ್ತಾರೆ.





ಬಣ್ಣದ ಗರಿಗಳು, ಕನ್ನಡಿಯ ಚೂರು, ಗೊಂಡೆ, ಕುಚ್ಚು, ಕೊನೆಗೆ ಚಿಕ್ಕಬಣ್ಣದ ಬೀಸಣಿಗೆ ಇವೆಲ್ಲ ಆದಿವಾಸಿ ಶಿರೋಭೂಷಣಗಳು





ನಗರಕ್ಕೆ ಹೊರಟಾಗ 'ಹಲ್ಬಿ' ನಾರಿಯರು ಮೈತುಂಬ ಬಟ್ಟೆ ಹೊದೆಯುತ್ತಾರೆ.





ಪ್ರಾಗೈತಿಹಾಸಿಕ ಕಲಾಕಾರನ ಸೃಷ್ಟಿ.



ನೃತ್ಯ ದಂಪತಿ

ಮುಕ್ತನೃತ್ಯ ವಿನ್ಯಾಸ



ಮುಕ್ತನೃತ್ಯ ವಿನ್ಯಾಸ





ತಮ್ಮ ಘೋಟುಲ್ ಪರಿಸರವನ್ನು ಸ್ವಚ್ಛವಾಗಿಸುವ ಕಿರಿಯರು

ಹತ್ತಿರದ ನಗರಕ್ಕೆ ಹೊರಟಾಗ ಆದಿವಾಸಿ 'ಪೋಕ್ತ' ಆಗುತ್ತಾನೆ! ಅಂದರೆ ಮೈತುಂಬ ಬಟ್ಟೆ ಧರಿಸುತ್ತಾನೆ.











ಆದಿವಾಸಿ ಕೂದಲ ಕ್ಲಿಪ್‌ಗಳು



ಸಂತೆಗೆ ಹೊರಟಾಗ












ಮಹಿಳೆಯರ ಶಿರೋಭೂಷಣಗಳು





ಬೋಯಿಗಳಾಗಿ ಹೆಂಗಳೆಯರು



ಜೆಸ್ಸೊ ಚಿತ್ರದಲ್ಲಿಯ ಪಲ್ಲಕ್ಕಿ



ಡಾ. ಕೃಷ್ಣಾನಂದ ಕಾಮತ್ (1934–2002) ಕನ್ನಡ ನಾಡು ಕಂಡ ಅಪೂರ್ವ ಪ್ರತಿಭೆ. ಅಪ್ಪಟ ಮನುಷ್ಯರು. ಸಂಶೋಧಕರು, ಕಾಲುಗಳಿಗೆ ಚಕ್ರ ಕಟ್ಟಿಕೊಂಡುಸುತ್ತಿದ ಅಪರೂಪದ ಕ್ಷೇತ್ರಕಾರ್ಯಕರ್ತರು, ಸೃಜನಶೀಲ ಬರಹಗಾರರು, ಅಪೂರ್ವ ಕುಂಚ ಕಲಾವಿದರು, ಛಾಯಾಗ್ರಾಹಕರು, ಪ್ರಾಣಿ–ಪಕ್ಷಿಗಳ ತಜ್ಞರು, ಒಬ್ಬ ವಿಜ್ಞಾನಿ, ಪಾಕಪ್ರವೀಣರು... ಹೀಗೆ ಬಹು ಆಯಾಮಗಳಲ್ಲಿ ತಮ್ಮ ಜೀವಿತಾವಧಿಯನ್ನು ಸವೆಸಿದ ಅನರ್ಘ್ಯ ರತ್ನ. ಕಾಮತರ ಯಾವುದೇ ಬರವಣಿಗೆಯಲ್ಲೂ ಒಬ್ಬ ಸಂಶೋಧಕನಿರುತ್ತಾನೆ. ಬರಹದ ವಿಷಯ ವಸ್ತು ವಿಚಾರದಲ್ಲಿ ತರ್ಕಬದ್ಧವಾದ, ವೈಜ್ಞಾನಿಕ ದೃಷ್ಟಿಕೋನ ಎದ್ದು ಕಾಣುವ ಅಂಶ. ಲಘು ಹರಟೆಯ ಅವರ ಧಾಟಿ ಓದುಗಸ್ನೇಹಿಯಾಗಿರುತ್ತದೆ. ತುಂಬಾ ಗಹನವಾದ ವಿಚಾರಗಳನ್ನು ಸಾಮಾನ್ಯರಿಗೂ ಅರ್ಥವಾಗುವ ಹಾಗೆ ಸರಳ ನಿರೂಪಣೆಯನ್ನು ಕಾಣಬಹುದು. ಹಾಸ್ಯದ ಮೂಲಕವೇ ಗಂಭೀರ ವಿಚಾರಗಳನ್ನು ತಿಳಿಹೇಳುವ ಛಾತಿ ಕೃಷ್ಣಾನಂದ ಕಾಮತರ ಲೇಖನಿ, ಕುಂಚ, ಕ್ಯಾಮೆರಾಗಳಿಗೆ ಇತ್ತು ಎಂಬುದನ್ನು ಅವರನ್ನು ಓದಿಕೊಂಡ ಯಾರಿಗಾದರೂ ಅನಿಸದಿರದು. ಭಾರತದ ಆದಿವಾಸಿ ಬದುಕಿನ ಅನೇಕ ಮಜಲುಗಳನ್ನು ಕಣ್ಣಾರೆ ಕಂಡು ಕಾಮತರು ಬಿಡಿಸಿಟ್ಟಿದ್ದಾರೆ. ಕನ್ನಡ ನಾಡು ಇಂತಹ ಮಹನೀಯರನ್ನು ಪಡೆದು ನಿಜಕ್ಕೂ ಧನ್ಯವಾಗಿದೆ. ಇದು ಕಾಮತರು ಬಿಡಿಸಿಟ್ಟು ಅಲ್ಲಲ್ಲಿ ಚದುರಿಹೋಗಿದ್ದ ರೇಖಾಚಿತ್ರಗಳನ್ನು ಒಂದೆಡೆ ಕಲೆಹಾಕಿ ಸಂಕಲನದ ರೂಪದಲ್ಲಿ ಸಹೃದಯರ ಕೈಲಿಡುತ್ತಿದ್ದೇವೆ. ಈ ಕೃತಿಯ ಮೂಲಕ ಕಾಮತರ ಆಸಕ್ತಿಯ ಕ್ಷೇತ್ರಗಳ ದರ್ಶನವಾಗುತ್ತದೆ. ಇಲ್ಲಿ ಬುಡಕಟ್ಟು ಲೋಕವಿದೆ. ಗ್ರಾಮೀಣ ಪರಿಸರದ ಬುದಕು–ಬವಣೆಗಳು ಅನಾವರಣಗೊಂಡಿವೆ. ಅವರ ಈ ಕೃತಿಯನ್ನು ಹೊರತರುವಲ್ಲಿ ಪ್ರಗತಿ ಗ್ರಾಫಿಕ್ಸ್‌ಗೆ ಅತೀವ ಆನಂದವೆನಿಸಿದೆ. ಇದು ಕಾಮತರ ರೇಖಾಚಿತ್ರಗಳ ಮೊದಲ ಸಂಪುಟ. ಮತ್ತೊಂದು ಸಂಪುಟವನ್ನು ಹೊರತರಲು ಪ್ರಗತಿ ಗ್ರಾಫಿಕ್ಸ್ ಕಾತರವಾಗಿದೆ.

ಡಾ. ಎಂ. ಬೈರೇಗೌಡ

978-93-81441-25-1




₹ 300/-

200